# ವಿಮೋಚನಾ ಸಂಘದ ಪ್ರಸಾರಂಗ

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು :
**ಶ್ರೀ ಪ್ರಕಾಶ ಮ. ಶಿವಾಪೂರ**
ಸೌ. ಸುಮಿತ್ರಾದೇವಿ ಪಾಟೀಲ ಹಿರಿಯ
ಪ್ರಾಥಮಿಕ ಶಾಲೆ, ಹಳ್ಳೂರ.
ತಾ॥ ಗೋಕಾಕ ಜಿ॥ ಬೆಳಗಾವಿ

ಮಾರ್ಗದರ್ಶಕರು :
**ಡಾ. ಅಶೋಕ ಎಮ್. ನರೋಡೆ**
ಕನ್ನಡ ಪ್ರಾಧ್ಯಾಪಕರು,
ಕೆ.ಎಲ್.ಇ. ಸಂಸ್ಥೆಯ ಎಸ್. ಸಿ. ಪಿ.
ಪದವಿ ಮಹಾವಿದ್ಯಾಲಯ, ಮಹಾಲಿಂಗಪೂರ.
ಜಿ॥ ಬಾಗಲಕೋಟ.




**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ. ಜಿ. ಬೆಳಗಾವಿ**



ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೧

# ವಿಮೋಚನಾ ಸಂಘದ ಪ್ರಸಾರಂಗ

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ನಿಬಂಧ)


ಸಂಶೋಧಕರು :

**ಶ್ರೀ ಪ್ರಕಾಶ ಮ. ಶಿವಾಪೂರ**

ಸೌ. ಸುಮಿತ್ರಾದೇವಿ ಪಾಟೀಲ ಹಿರಿಯ
ಪ್ರಾಥಮಿಕ ಶಾಲೆ, ಹಳ್ಳೂರ.
ತಾ॥ ಗೋಕಾಕ ಜಿ॥ ಬೆಳಗಾವಿ

ಮಾರ್ಗದರ್ಶಕರು :

**ಡಾ. ಅಶೋಕ ಎಮ್. ನರೋಡೆ**

ಕನ್ನಡ ಪ್ರಾಧ್ಯಾಪಕರು,
ಕೆ.ಎಲ್.ಇ. ಸಂಸ್ಥೆಯ ಎಸ್. ಸಿ. ಪಿ.
ಪದವಿ ಮಹಾವಿದ್ಯಾಲಯ, ಮಹಾಲಿಂಗಪೂರ.
ಜಿ॥ ಬಾಗಲಕೋಟ.








**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**

**ಹಾರೂಗೇರಿ. ಜಿ. ಬೆಳಗಾವಿ**

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೧

# ಪ್ರಮಾಣ ಪತ್ರ

**'ವಿಮೋಚನಾ ಸಂಘದ ಪ್ರಸಾರಂಗ'** ಎಂಬ ಶೀರ್ಷಿಕೆಯ ನಿಬಂಧವನ್ನು **ಡಾ. ಅಶೋಕ ಮ. ನರೋಡೆ** ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.



ಸ್ಥಳ : ಹಾರೂಗೇರಿ
ದಿನಾಂಕ : ೧೦-೦೬-೨೦೧೧

**ಶ್ರೀ ಪ್ರಕಾಶ ಮ. ಶಿವಾಪೂರ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

**ಶ್ರೀ ಪ್ರಕಾಶ ಮ. ಶಿವಾಪೂರ** ಇವರು **'ವಿಮೋಚನಾ ಸಂಘದ ಪ್ರಸಾರಲಿಂಗ'** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೧೦-೦೬-೨೦೧೧

**ಡಾ. ಅಶೋಕ ಮ. ನರೋಡೆ**
ಮಾರ್ಗದರ್ಶಕರು,
ಕೆ.ಎಲ್.ಇ. ಸಂಸ್ಥೆಯ ಎಸ್.ಸಿ.ಪಿ.
ಪದವಿ ಮಹಾವಿದ್ಯಾಲಯ,
ಮಹಾಲಿಂಗಪೂರ. ಜಿ॥ ಬಾಗಲಕೋಟ.

# ಅರಿಕೆ

ನಾನು ಶ್ರೀರಾಮ ವಿದ್ಯಾವರ್ಧಕ ಸಮಿತಿಯ ಸೌ. ಸುಮಿತ್ರಾದೇವಿ ಪಾಟೀಲ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕನಾಗಿದ್ದು, ಎಂ.ಫಿಲ್. ಪದವಿ ಪಡೆಯಲು ಪ್ರೇರಣಾ ಶಕ್ತಿಯಾಗಿ ಮಾರ್ಗದರ್ಶನ ನೀಡಿ ನಿಬಂಧ ರೂಪಿಸಲು ಸಹಕರಿಸಿದ ಡಾ॥ ಅಶೋಕ ಎಮ್. ನರೋಡೆಯವರಿಗೂ ತುಂಬು ಹೃದಯದಿಂದ ಅಭಿನಂದನೆ ಸಲ್ಲಿಸುತ್ತೇನೆ.

ಎಂ.ಫಿಲ್. ಪದವಿ ಅಧ್ಯಯಿಸಲು ಪೂರಕ ಸಾಮಗ್ರಿ ಸಂಗ್ರಹಿಸಲು ಅಥಣಿಯ ವಿಮೋಚನಾ ಪುನರ್ವಸತಿ ಸಂಸ್ಥೆಗೆ ಭೆಟ್ಟಿಯಿಟ್ಟಾಗ, ಸೂಕ್ತ ಸಲಹೆ ನೀಡಿ, ಎಲ್ಲ ನೆರವು ನೀಡಿದ ಸನ್ಮಾನ್ಯ ಶ್ರೀ ಬಿ. ಎಲ್. ಪಾಟೀಲರಿಗೂ; ವಿಮೋಚನಾ ಸಂಸ್ಥೆಯ ಸಮಸ್ತ ಪದಾಧಿಕಾರಿಗಳು; ಗ್ರಂಥಾಲಯದ ಸಿಬ್ಬಂಧಿಯವರಿಗೂ ನನ್ನ ಗೌರವಾದರದ ನಮನಗಳು.

ನಮ್ಮ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮಾರುತಿ ದಾಸರ, ಹಾಗೂ ಪೋಷಕರಾದ ಶ್ರೀ ಭೀಮಗೌಡ ಪಾಟೀಲ, ಶ್ರೀ ಭರಮಪ್ಪಾ ಸಪ್ತಸಾಗರ ಇವರೆಲ್ಲರಿಗೂ ಚಿರಋಣಿಯಾಗಿದ್ದೇನೆ. ಕ್ಷೇತ್ರಕಾರ್ಯಕ್ಕೆ ಸಹಕಾರ ನೀಡಿದ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಜಿ. ಜೆ. ಈಡನ್ನವರ, ಸಹಶಿಕ್ಷಕರೆಲ್ಲರಿಗೂ ಅಭಿನಂದನೆ ಸಲ್ಲಿಸುತ್ತೇನೆ.

ಉನ್ನತ ವ್ಯಾಸಂಗಕ್ಕೆ ಪ್ರೇರಣೆಯನ್ನು ನೀಡಿ ಏನೇ ಸಮಸ್ಯೆಗಳು ಬಂದರೂ ಎದೆಗುಂದದೆ ಅವುಗಳನ್ನು ಎದುರಿಸಿ ಮುನ್ನಡೆಯಲು ಆತ್ಮ ಸ್ಥೈರ್ಯವನ್ನು ತುಂಬಿದ ಸಂಶೋಧನಾ ಕೇಂದ್ರದ ಸಂಯೋಜಕರಾದ ಡಾ॥ ವ್ಹಿ. ಎಸ್. ಮಾಳಿ ಗುರುಗಳಿಗೆ ಚಿರಋಣಿಯಾಗಿದ್ದೇನೆ.

ಸಂಶೋಧನ ಕೇಂದ್ರದ ರೂವಾರಿಯಾದ ಶ್ರೀ ಬಿ. ಆರ್. ಧರೂರ ಅವರನ್ನು ಸದಾಕಾಲ ಸ್ಮರಿಸುವೆ. ಹಾಗೂ ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿದ ಶ್ರೀ ಮುರಗೇಶ ಕೌಲಾಪೂರ ಅವರಿಗೂ ನನ್ನ ವಂದನೆಗಳು.

ದಿ : ೧೦-೦೬-೨೦೧೧

**ಶ್ರೀ ಪ್ರಕಾಶ ಮ. ಶಿವಾಪೂರ**
**ಸೌ. ಸುಮಿತ್ರಾದೇವಿ ಪಾಟೀಲ ಹಿರಿಯ**
**ಪ್ರಾಥಮಿಕ ಶಾಲೆ, ಹಳ್ಳೂರ.**
**ತಾ॥ ಗೋಕಾಕ ಜಿ॥ ಬೆಳಗಾವಿ**

# ಪರಿವಿಡಿ


| | | ಪುಟ ಸಂಖ್ಯೆ |
|---|---|---|
| ಅಧ್ಯಾಯ – ೧ : | ಅಧ್ಯಯನ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ | ೦೧–೦೩ |
| ಅಧ್ಯಾಯ – ೨ : | ವಿಮೋಚನಾ ಪುನರ್ವಸತಿ ಸಂಸ್ಥೆಯ ಪರಿಚಯ | ೦೪–೦೫ |
| ಅಧ್ಯಾಯ – ೩ : | ವಿಮೋಚನಾ ಸಂಘದ ಪ್ರಸಾರಂಗ | ೦೬–೦೮ |
| ಅಧ್ಯಾಯ – ೪ : | ವಿಮೋಚನಾ ಪ್ರಕಾಶನ ಪದ್ಯ ಸಾಹಿತ್ಯ | ೦೯–೧೪ |
| ಅಧ್ಯಾಯ – ೫ : | ವಿಮೋಚನಾ ಪ್ರಕಾಶನ ಗದ್ಯ ಸಾಹಿತ್ಯ | ೧೫–೪೦ |
| ಅಧ್ಯಾಯ – ೬ : | ಇತರ ಸಾಹಿತ್ಯ | ೪೧–೬೩ |
| ಅಧ್ಯಾಯ – ೭ : | ಸಮಾರೋಪ | ೬೪–೬೫ |
| ಅನುಬಂಧಗಳು : | | |
| ೧) | ವಿಮೋಚನಾ ಪ್ರಸಾರಂಗದ ಪ್ರಕಟನೆಗಳು | ೬೬–೬೮ |
| ೨) | ಪರಾಮರ್ಶನ ಗ್ರಂಥಗಳು | ೬೯–೭೦ |
| ಭಾವಚಿತ್ರಗಳು : | | |

## ಅಧ್ಯಾಯ - ೧ :

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ಅಧ್ಯಯನದ ಉದ್ದೇಶ :

"ದೇವದಾಸಿ ಪುನರ್ವಸತಿ ಸಂಘ" ಕುರಿತು ಅಭ್ಯಸಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಸಮಾಜದಲ್ಲಿ ಮೂಡನಂಬಿಕೆ, ಮೌಢ್ಯತೆಗಳೆಂಬುವವು ಹಾಸುಹೊಕ್ಕಾಗಿವೆ. ಈ ಅಂಧಕಾರವನ್ನು ಹೊಗಲಾಡಿಸಬೇಕಾದರೆ ಸಮಾಜದಲ್ಲಿನ ಯುವಕ, ಯುವತಿಯರು ಜಾಗೃತರಾಗಿರಬೇಕು. ಹಿಂದಿನ ಕಾಲದಲ್ಲಿ ಸತಿ ಸಹಗಮನ ಪದ್ಧತಿ ಜಾರಿಯಲ್ಲಿತ್ತು. ಸತಿ ಸಹಗಮನ ಪದ್ಧತಿ ಎಂದರೇ ಪತಿಯು ಏನಾದರು ಕಾರಣಾಂತರದಿಂದ ಮರಣ ಹೊಂದಿದರೆ, ಸತಿಯು ಸಹ ಚಿತೆಗೇರುವುದು. ಇಂತಹ ಮೌಢ್ಯತೆಯ ಕರಿನೆರಳು ಹಿಂದಿನ ಕಾಲದಲ್ಲಿತ್ತು ಎಂಬುವುದು ವಿಷಾದದ ಸಂಗತಿ. ಆದರೆ ಬರಬರುತ್ತ ಮಹಿಳೆಯರಲ್ಲಿ ಹಾಗೂ ಪುರುಷರಲ್ಲಿ ಈ ಪದ್ಧತಿಯ ಬಗ್ಗೆ ಅಸೂಯೆ ಉಂಟಾಯಿತು. ಇದರ ವಿರುದ್ಧ ಜನರು ಸಂಘಟನೆಯಾಗಲು ಪ್ರಾರಂಭಿಸಿದರು ಮತ್ತು ಪ್ರಬಲವಾಗಿ ವಿರೋದವನ್ನು ವ್ಯಕ್ತಪಡಿಸಿದರು. ಹೀಗೆ ಹೋರಾಟದ ಪಲವಾಗಿ ಸತಿ-ಸಹಗಮನ ಪದ್ಧತಿಯು ನಿಂತಿತು ಎಂಬುದು ಸಂತೋಷದ ಸಂಗತಿ.

ಇಂತಹ ಅನಿಷ್ಟ ಪದ್ಧತಿಗಳನ್ನು ತಡೆಗಟ್ಟಬೇಕಾದರೆ ಪ್ರತಿಯೊಬ್ಬರಿಗೂ ಮೌಲ್ಯಯುತವಾದ ಶಿಕ್ಷಣವು ಅವಶ್ಯಕತೆ ಇದೇ ಎಂಬುವದನ್ನು ಅರಿಯಬೇಕು. ತದನಂತರ ಸಮಾಜದ ಮತ್ತೊಂದು ಅನಿಷ್ಟ ಪದ್ಧತಿಯೆಂದರೆ ದೇವದಾಸಿ ಪದ್ಧತಿ ಹಿಂದಿನ ಕಾಲದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ದೇವರಿಗೆ ಆಕಳು, ಹೋರಿ, ಗೂಳಿ ಬಿಡುವದನ್ನು ಪ್ರಾರಂಭಿಸಿದರು. ಇದನ್ನು ಪ್ರಾರಂಭಿಸಿದ್ದು ಪೂಜಾರಿಯೇ ಆಗಿರುತ್ತಿದ್ದ. ಅದರ ಪಲಾನುಭವಿಯು ಅವನೇ ಆಗಿರುತ್ತಿದ್ದ. ಮುಂದೆ ಬದಲಾವಣೆಯಾಗಿ ದೇವರ ಸೇವೆಗಾಗಿ ಹೆಣ್ಣುಗಳನ್ನು ಬಿಡುವ ಪದ್ಧತಿ ಪ್ರಾರಂಭವಾಯಿತು.

ಈ ದೇವದಾಸಿ ಪದ್ಧತಿ ಎಂದರೇನು? ಸಾಮಾನ್ಯ ಅರ್ಥದಲ್ಲಿ ದೇವರ ಸೇವೆಗೆ ತನ್ನನ್ನು ತಾನು ಅರ್ಪಿಸಿಕೊಂಡವಳು ಎಂದರ್ಥ. ಆದರೆ ಗ್ರಾಮೀಣ ಪ್ರದೇಶದಲ್ಲಿ ಗೌಡನೇ ಪ್ರಮುಕವಾದ ವ್ಯಕ್ತಿ. ಅವನು ಹೇಳಿದಂತೆಲ್ಲ ಊರಿನ ಜನರೆಲ್ಲರೂ ಕೇಳಬೇಕು. ಅವನ ಮಾತುಗಳೇ ವೇದ ವಾಕ್ಯ. ಆದ್ದರಿಂದ ಗೌಡನ ಆದೇಶದಂತೆ ದೇವರ ಹೆಸರಿನ ಮೇಲೆ ಬಡ ಹೆಣ್ಣುಮಕ್ಕಳನ್ನು ಬಸವಿಯನ್ನಾಗಿ ಬಿಡುವಂತೆ ಮಾಡುತ್ತಿದ್ದರು. ಹೀಗೆ ಬಸವಿಯಾಗಿ ಬಿಟ್ಟಂತಹ ಬಡ ಹೆಣ್ಣುಮಕ್ಕಳನ್ನು ಶ್ರೀಮಂತ ವರ್ಗದ ಜನರು ಹಣದ ಆಮಿಷವಡ್ಡಿ ತಮ್ಮ ದೈಹಿಕ ಸುಕಭೋಗಕ್ಕಾಗಿ ಉಪಯೋಗಿಸಲು ಪ್ರಾರಂಬಿಸಿದರು.

ಯಾವಾಗ ಈ ಕಾರ್ಯವು ಪ್ರಾರಂಭವಾಯಿತೋ, ಅಂದಿನಿಂದ ಹಣದ ಆಶೇಯಿಂದಲೋ ಅಥವಾ ಬಡತನದ ಬೇಗೆಯಿಂದಲೊ ಸೂಳೆಯರ ಸಂಖ್ಯೆಯು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಯಿತು. ಇಂತಹ ಅನಿಷ್ಟ ಪದ್ಧತಿಯನ್ನು ತಡೆಯಲು ಯಾರು ಮುಂದೆ ಬರಲು ಪ್ರಯತ್ನ ಮಾಡಲಿಲ್ಲ. ಯಾಕೆಂದರೆ ಅವರಿಗೆ ಅದರಲ್ಲಿಯೆ ಪರಮಾನಂದವಿದೆ ಎಂದು ತಿಳಿದುಕೊಂಡಿದ್ದರು. ಆದರೆ ಅದರಿಂದ ಮುಂದೆ ಆಗುವ ಅನಾಹುತಗಳ ಬಗ್ಗೆ ಅರಿವೆ ಇದ್ದಿರಲಿಲ್ಲ ಎಂಬುದು ಸ್ಮರಿಸಬೇಕಾದ ವಿಷಯ. ಯಾಕೆಂದರೆ ಅವರಿಗೆ ಅರಿವಿನ ಬಾಗಿಲನ್ನು ತಟ್ಟುವವರು ಯಾರು ಇದ್ದಿರಲಿಲ್ಲ.

ಎಲ್ಲಮ್ಮನ ಹೆಸರಿನಲ್ಲಿ ಹುಟ್ಟಿಕೊಂಡ ಈ ದೇವದಾಸಿ ಪದ್ಧತಿಯನ್ನು ಹೋಗಲಾಡಿಸಲು ವಿಮೋಚನಾ ಪುನರ್ವಸತಿ ಸಂಘವು ಪ್ರಾಮಾಣಿಕ ಪ್ರಯತ್ನ ಮಾಡಿದೆ. ಮುಗ್ದ ಬಡವರನ್ನು ಅಂಜಿಸುತ್ತ ವರ್ಗ, ವರ್ಣಗಳ’ ದಬ್ಬಾಳಿಕೆಯನ್ನು ಮಾಡಿಕೊಂಡು ಹೆಣ್ಣು ಕುಲವನ್ನು ಶೋಷಿಸುತ್ತಿರುವ ಕ್ರೂರ ವ್ಯವಸ್ಥೆಯನ್ನು ಕಿತ್ತೊಗೆಯಲು ಕಟ್ಟಬದ್ದರಾಗಿ ನಿಂತಿರುವ ಶ್ರೀ ಬಿ. ಎಲ್. ಪಾಟೀಲರ ಕುರಿತು ಹಾಗೂ ಅವರು ಪ್ರಕಟನೆ ಮಾಡಿರುವ ಪುಸ್ತಕಗಳ ಪರಿಪೂರ್ಣವಾದ ಮಾಹಿತಿಯನ್ನು ಈ ನಿಬಂಧ ಬರಹದಲ್ಲಿ ನೋಡಬಹುದು.

**ಸ್ವರೂಪ :**

ಅಧ್ಯಾಯ ಎರಡರಲ್ಲಿ ವಿಮೋಚನಾ ಪುನರ್ವಸತಿ ಸಂಸ್ಥೆಯ ಸ್ಥೂಲ ಪರಿಚಯ ಮಾಡಿ ಸಂಘದ ಪ್ರಸಾರಂಗದ ಬಗೆಗೆ ತಿಳಿಯಲಾಯಿತು. ಸಂಘವು ಪ್ರಕಾಶಿಸಿದ ಪದ್ಯ ಸಾಹಿತ್ಯ, ಗದ್ಯ ಸಾಹಿತ್ಯ ಹಾಗೂ ಇತರ ಸಾಹಿತ್ಯವನ್ನು ಕುರಿತು ಅವಲೋಕಿಸಲಾಯಿತು.

**ವ್ಯಾಪ್ತಿ :**

ವಿಮೋಚನಾ ಸಂಘದ ಪ್ರಸಾರಂಗಕ್ಕೆ ಸಂಬಂಧಿಸಿದಂತೆ ಲಭ್ಯವಾದ ಎಲ್ಲ ಗ್ರಂಥಗಳನ್ನು ಅವಲೋಕಿಸಲಾಗಿದೆ. ಇಡೀ ನಾಡಿನ ತುಂಬೆಲ್ಲ ಕಾರ್ಯವ್ಯಾಪ್ತಿಯನ್ನು ಹೊಂದಿರುವ ಸಂಘ ಸಮಾಜದ ಒಳಿತಿಗಾಗಿ ಅನೇಕ ಪ್ರಕಟಣೆಗಳನ್ನು ಕೈಗೊಂಡಿದೆ. ತನ್ನ ಪ್ರಕಟನೆಯ ಮೂಲಕ ಸಮಾಜದಲ್ಲಿನ ಅನಿಷ್ಟ ಪದ್ಧತಿಯ ಬಗೆಗೆ ಅರಿವು ಮೂಡಿಸುವ ಕಾರ್ಯದಲ್ಲಿ ತೊಡಗಿದೆ. ನಾನು ಇಲ್ಲಿ ಪ್ರಮುಖವಾದ ಗ್ರಂಥಗಳನ್ನು ಕುರಿತು ಅದರಲ್ಲಿರುವ ಮುಖ್ಯ ಅಂಶಗಳನ್ನು ಇಲ್ಲಿ ಚಿತ್ರಿಸಿದ್ದೇನೆ. ಒಂದು ಸಂಘವು ಯಾವ ರೀತಿಯಲ್ಲಿ ಕಾರ್ಯಸಾಧನೆಯನ್ನು ಮಾಡುತ್ತದೆ ಎಂಬುವದನ್ನು ಇಲ್ಲಿ ಅರಿಯಬಹುದಾಗಿದೆ.

“ವಿಮೋಚನಾ ಪುನರ್ವಸತಿ’ ಸಂಘವು ೧೯೮೪ ರಲ್ಲಿ ಪ್ರಾರಂಭವಾಗಿ ಇಲ್ಲಿಯವರೆಗೆ ೫೯ ಗ್ರಂಥ ಕುಸುಮಗಳನ್ನು ಲೋಕಾರ್ಪಣೆ ಮಾಡಿದೆ. ಈ ಸಂಸ್ಥೆಯು ಸ್ವದೇಶದಲ್ಲಿ ಅಷ್ಟೇ ಅಲ್ಲದೇ ವಿದೇಶಗಳಿಂದಲೂ ಹಣವನ್ನು ಸಂಗ್ರಹಿಸಿ, ಅದರ ಮೂಲಕ ಬಡಮಕ್ಕಳಿಗೆ ಉಚಿತವಾಗಿ ಶಿಕ್ಷಣವನ್ನು, ವೈದ್ಯಕೀಯ ಸೌಲಭ್ಯವನ್ನು ಕೊಡಲು ಮುಂದಾಗಿದೆ ಎಂಬುವದನ್ನು ಇಲ್ಲಿ ಅವಲೋಕಿಸಿರುವ ಗ್ರಂಥಗಳ

ಸಹಾಯದಿಂದ ತಿಳಿಯಬಹುದಾಗಿದೆ. ಕರ್ನಾಟಕ ಮಹಾರಾಷ್ಟ್ರ ಗಡಿಪ್ರದೇಶದಲ್ಲಿ ವ್ಯಾಪಕವಾಗಿ ಹಬ್ಬಿದ ದೇವದಾಸಿ ಪದ್ಧತಿಯನ್ನು ನಿರ್ಮೂಲನೆ ಮಾಡುವ ಮಹಾತ್ವಾಕಾಂಕ್ಷೆ ಉದ್ದೇಶವನ್ನು ಇಟ್ಟುಕೊಂಡು ಉಲ್ಲಾಸಭರಿತವಾಗಿ ಜನ್ಮತಾಳಿದ ಸಂಸ್ಥೆಯ ಕಿರುಪರಿಚಯವನ್ನು ಈ ನಿಬಂಧದಲ್ಲಿ ನೀಡಲಾಗಿದೆ. ಆದ್ದರಿಂದ ಇದರ ಕಾರ್ಯವ್ಯಾಪ್ತಿಯು ಸಾಗರದಂತೆ ಇಡೀ ನಾಡಿನ ತುಂಬೆಲ್ಲ ಪಸರಿಸಿದೆ ಎಂದರೆ ತಪ್ಪಾಗಲಾರದು. ಸಂಸ್ಥೆಯ ಅಧ್ಯಕ್ಷರ ಅಭಿಪ್ರಾಯ ಸಂಗ್ರಹಿಸಿ ಹಾಗೂ ಪ್ರಕಟನೆಯ ಕೃತಿ ಕುಸುಮಗಳನ್ನು ಸೂಕ್ಷ್ಮವಾಗಿ ಇಲ್ಲಿ ಗಮನಿಸಲಾಯಿತು.

# ಅಧ್ಯಾಯ – ೨ :
# ವಿಮೋಚನಾ ಪುನರ್ವಸತಿ ಸಂಸ್ಥೆಯ ಪರಿಚಯ

**ಪ್ರವೇಶ :**

ಸತಿ ಪದ್ಧತಿಯ ಹೆಸರಲ್ಲಿ ಅನೇಕ ಹೆಣ್ಣುಮಕ್ಕಳನ್ನು ನೂಕಿದ್ದೇವೆ. ದೇವದಾಸಿಯರನ್ನು ನಿತ್ಯ ಸುಮಂಗಲೆಯರೆಂದು ಕರೆದು, ಆತ್ಮ ವಂಚನೆ ಮಾಡಿಕೊಂಡಿದ್ದೇವೆ. ಉಸಿರು ಕಟ್ಟುವಂತಹ ಬೂರಕಾ ತೊಡಿಸಿದ್ದೇವೆ. ಇವೆಲ್ಲವು ಧರ್ಮ, ದೇವರು ಹಾಗೂ ವ್ಯವಸ್ಥೆಯ ಹೆಸರಿನಲ್ಲಿ ನಡೆದಿವೆ ಹಾಗೂ ನಡೆಯುತ್ತಲೇ ಇರುತ್ತವೆ. ಇವೆಲ್ಲವುಗಳ ನಡುವೆ ದೇವದಾಸಿ ಮುಗ್ಧ ಹೆಣ್ಣುಮಕ್ಕಳು ವಿಮೋಚನೆಗಾಗಿ ಹಾಗೂ ಪೂನರ್ವಸತಿಗಾಗಿ ಮಾನವೀಯ ಪ್ರಯತ್ನವೊಂದು ಅಥಣಿಯಲ್ಲಿ ನಡೆದಿದೆ. ಹಲವು ಹೃದಯವಂತರು ಹಗಲಿರುಳು ದುಡಿದು "ವಿಮೋಚನ ದೇವದಾಸಿ ಪುನರ್ವಸತಿ ಸಂಘ"ವನ್ನು ಕಟ್ಟಿ ರಚನಾತ್ಮಕವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಇಂತಹ ಸಾರ್ಥಕ ಯೋಜನೆಯ ಸ್ಥೂಲ ಪರಿಚಯ ಇಲ್ಲಿದೆ.

## ಸಂಘದ ಉದಯ :

ಬಿ. ಎಲ್. ಪಾಟೀಲರು ಹಾಗೂ ಜೋಗನ್ ಶೆಹರ ಅವರು ದೇವದಾಸಿ ಪದ್ಧತಿಯ ಸಮಸ್ಯೆಯ ಮೂಲದ ಕುರಿತು ಪರಸ್ಪರ ಚರ್ಚಿಸಿದರು. ಕನಿಷ್ಟ ಪಕ್ಷ ದೇವದಾಸಿ ಮಕ್ಕಳಿಗೆ ಇಂತಹ ಪರಿಸರಕ್ಕೆ ತಾಗದಂತೆ ಮಾಡಿದರೆ ಅನಿಷ್ಟ ಪದ್ಧತಿಯನ್ನು ನಿಯಂತ್ರಿಸಲು ಸಾಧ್ಯವೆಂಬುದು ಅವರ ಭಾವನೆಯಾಗಿತ್ತು.

ಅಥಣಿಯ ಹಿರಿಯ ವಕೀಲರು ಸಮಾಜ ಸೇವಕರು, ಕ್ರೀಯಾಶೀಲ ವ್ಯಕ್ತಿಯಾದ ಪಾಟೀಲರು ದೇವದಾಸಿಯರನ್ನು ಕುರಿತು ಚರ್ಚಿಸಿ, ಶಾಶ್ವತವಾಗಿ ವಿಮೋಚನೆ ಮಾಡುವ ಸಲುವಾಗಿ ತರುಣ ತರುಣಿಯರನ್ನು ಸಂಘಟಿಸಿ ದಿನಾಂಕ ೨೩–೦೩–೧೯೮೫ ರಂದು "ವಿಮೋಚನಾ ದೇವದಾಸಿ ಪುನರ್ವಸತಿ ಸಂಘ"ವನ್ನು ಸ್ಥಾಪಿಸಲಾಯಿತು. ಪ್ರಾರಂಭದ ಅದ್ಯಕ್ಷಸ್ಥಾನವನ್ನು ಅದರ ಕಾರ್ಯಭಾರವನ್ನು ನೋಡಿಕೊಳ್ಳುವ ಹೊಣೆಯನ್ನು ಶ್ರೀ ಬಿ. ಎಲ್. ಪಾಟೀಲವರು ವಹಿಸಿಕೊಂಡರು.

ವಿಮೋಚನಾ ಸಂಘದ ಧ್ಯೇಯ ಧೋರಣೆಗಳು ಮಾನವೀಯ ಮೌಲ್ಯಗಳು ದೃವಿತವಾಗಿದ್ದವು. ಸಮಾಜದಲ್ಲಿನ ಜನರ ಮನಸ್ಸಿನಲ್ಲಿ ಹುದುಗಿಕೊಂಡಿರುವ ಮೌಡ್ಯತೆಗಳನ್ನು ತೋಲಗಿಸುವ ಸಲುವಾಗಿ

ಬಿ. ಎಲ್. ಪಾಟೀಲರು ಹಗಲು ರಾತ್ರಿ ಶ್ರಮಿಸುತ್ತಿದ್ದರು. ವಿಮೋಚನಾ ಸಂಘ ವೈಚಾರಿಕವಾಗಿ ಮುನ್ನಡೆಯಲು ಅನೇಕ ಮಾರ್ಗದರ್ಶಿ ಸೂತ್ರಗಳನ್ನು ಕಂಡುಕೊಳ್ಳಬೇಕಾಗಿತ್ತು. ಅದಕ್ಕಾಗಿ ರಾಜ್ಯ ಮಟ್ಟದ ವಿಚಾರ ಸಂಕೀರ್ಣವೊಂದನ್ನು ಅಥಣಿ ತಾಲೂಕು ಕೊಕಟನೂರ ಗ್ರಾಮದಲ್ಲಿ ಏರ್ಪಡಿಸಲಾಯಿತು. ದೇವದಾಸಿ ಪದ್ಧತಿಯ ಮೂಲ ಪ್ರೇರಣೆಗಳು ಅವುಗಳನ್ನು ನಿವಾರಿಸುವ ನಿಟ್ಟಿನಲ್ಲಿ ಕ್ರಮಕೈಗೊಳ್ಳಲಾಯಿತು. ಈ ನಿಟ್ಟಿನಲ್ಲಿ ಸಂಘಕ್ಕೆ ಗಣ್ಯ ವ್ಯಕ್ತಿಗಳಿಂದ ಸಹಾಯ ಸಹಕಾರವು ದೊರೆಯಿತು. ಅಷ್ಟೇ ಅಲ್ಲದೇ ಅಂತರಾಷ್ಟ್ರೀಯ ಮನ್ನಣೆಯು ಸಿಕ್ಕಿತು. ಆದ್ದರಿಂದ ಸಂಸ್ಥೆಯು ದಿಟ್ಟ ಹೆಜ್ಜೆಯನಿತ್ತು ಮುಂದೆ ಸಾಗುತ್ತಿದೆ.

**ವಿಮೋಚನಾ ಸಂಘದ ಧ್ಯೇಯ ಉದ್ದೇಶಗಳು :**

೧) ದೇವದಾಸಿಯರನ್ನು ಸಾಮಾಜಿಕವಾಗಿ ಸುಧಾರಿಸುವುದು.

೨) ದೇವದಾಸಿಯರ ಸರ್ವಾಂಗೀಣ ಅಭಿವೃದ್ಧಿಗಾಗಿ ಧಾನಿಗಳಿಂದ ನಿಧಿ ಸಂಗ್ರಹಿಸಿ ಅನಿಷ್ಟ ಪದ್ಧತಿಯನ್ನು ತೊಡೆದು ಹಾಕುವುದು.

೩) ಅಸ್ಪ್ರಶ್ಯತೆ ವಿರುದ್ಧ ಹೋರಾಟ ನಡೆಸುವುದು.

೪) ಪುಸ್ತಕ ಪತ್ರಿಕೆ ಪ್ರಕಟಣೆ ಮಾಡುವದರ ಮೂಲಕ ದೇವದಾಸಿ ಪದ್ಧತಿಯ ವಿರುದ್ದ ಸಮರ ಸಾರುವುದು.

೫) ದೇವದಾಸಿ ಪದ್ಧತಿಯಿಂದ ಶೋಷಿತರಾದ ಹೆಣ್ಣುಮಕ್ಕಳಿಗೆ ವಿಶೇಷ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು.

೬) ದೇವದಾಸಿ ಪದ್ಧತಿಯಿಂದ ಮಕ್ಕಳಿಗೆ ವಿಶೇಷ ವೈದ್ಯಕೀಯ ಸೌಲಭ್ಯ ಒದಗಿಸುವುದು.

೭) ಸಂಘದ ಉದ್ದೇಶಗಳ ಸಾಧನೆಗಾಗಿ ಸರಕಾರಿ, ಅರೇ ಸರಕಾರಿ, ದೇಶ ವಿದೇಶಗಳ ಸಂಸ್ಥೆಗಳಿಂದ ಹಣ ಸಂಗ್ರಹಿಸುವುದು.

**ವಿಮೋಚನಾ ಸಂಘದ ಸಾದನೆಗಳು :**

ಸಿ.ಸಿ.ಎಫ್. ಯೋಜನೆಯ ಅಡಿಯಲ್ಲಿ ವಿಮೋಚನಾ ಸಂಘ ದತ್ತು ತೆಗೆದುಕೊಂಡ ೫೨೧ ಮಕ್ಕಳಲ್ಲಿ ೭೫ ಮಕ್ಕಳನ್ನು ಬಾಲವಾಡಿಯಲ್ಲಿ ೪೪೩ ಮಕ್ಕಳು ೧ ರಿಂದ ೧೦ ನೇ ತರಗತಿಯಲ್ಲಿ ಓದುತ್ತದ್ದಾರೆ. ಸಂಘದ ಆಶ್ರಯದಲ್ಲಿ ೪ ಮಹಿಳಾ ಮಂಡಳಿಗಳು, ೪ ವಯಸ್ಕರ ಶಿಕ್ಷಣ ಕೇಂದ್ರಗಳು, ಹಾಗೂ ೪ ರಾಷ್ಟ್ರೀಯ ಭಾವ್ಯಕಲಾ ಶಾಲೆಗಳು ಹಾಗೂ ೨ ಶಿಶು ವಿಹಾರಗಳು ಕಾರ್ಯನಿರ್ವಹಿಸುತ್ತಿವೆ. ಇದಲ್ಲದೆ ವಿಮೋಚನಾ ಗ್ರಂಥಾಲಯ ಹಾಗೂ ಪತ್ರಿಕೆಗಳ ಪ್ರಕಾಶನವನ್ನು ಸ್ಥಾಪಿಸಲಾಗಿದೆ. ಪ್ರತಿ ವರ್ಷ ಮಕ್ಕಳಿಗಾಗಿ ಬೇಸಿಗೆ ರಜಾ ದಿನ ಶಿಬಿರಗಳನ್ನು ಎರ್ಪಡಿಸಲಾಗುತ್ತಿದೆ. 'ಮಕ್ಕಳ ವಸಂತ ವಿಲಾಸ' ಎಂದು ಹೆಸರಿಟ್ಟು ಅದರ ಮೂಲಕ ಮಕ್ಕಳಿಗೆ ಚೈತನ್ಯ ತುಂಬುವ ಕಾರ್ಯದಲ್ಲಿ ತೊಡಗಿದೆ. ಹೀಗೆ ಅನೇಕ ರೀತಿಯ ಸಾಧನಾ ಕಾರ್ಯವನ್ನು ಸಂಘವು ಮಾಡುತ್ತಿದೆ.

## ಅಧ್ಯಾಯ – ೩ :

# ವಿಮೋಚನಾ ಸಂಘದ ಪ್ರಸಾರಂಗ

**ಪ್ರವೇಶ :**

ವಿಮೋಚನಾ ಕೀರ್ತಿಗೆ ಮುಕುಟು ಪ್ರಾಯವಾದ ಮತ್ತು ಜನಮಾನಸದಲ್ಲಿ ನಿರಂತರವಾಗಿ ನಿಲ್ಲಬಲ್ಲ ಮಹತ್ವದ ಇನ್ನೊಂದು ಹೆಜ್ಜೆ ಎಂದರೆ "ವಿಮೋಚನಾ ಪ್ರಕಾಶನ" ಶ್ರೀ ವ್ಹಿ. ಎಸ್. ಮನವಾಡೆಯವರ ನೇತೃತ್ವದಲ್ಲಿ ಮುನ್ನಡೆದು ಬಂದ ಈ ಅಂಗಸಂಸ್ಥೆಯಲ್ಲಿ ಹಲವಾರು ಮೌಲ್ಯಯುತವಾದ ಕೃತಿಗಳನ್ನು ಲೋಕಾರ್ಪಣೆ ಮಾಡಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ "ವಿಮೋಚನಾ ಪ್ರಕಾಶನ" ಮೂಲಕ ದಿಟ್ಟ ಹೆಜ್ಜೆಗಳನ್ನು ಚಿರಂತನಗೊಳಿಸಿದ್ದಾರೆ.

ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಎಲ್ಲ ಕ್ಷೇತ್ರಗಳಲ್ಲಿ ಹೊಸಬೆಳಕು ಮೂಡಿಸಿದರೂ ಸಹ ಸಂಘದ ಅಧ್ಯಕ್ಷರಾದ ಶ್ರೀ ಬಿ. ಎಲ್. ಪಾಟೀಲರ ಕನಸುಗಳು ಇನ್ನು ಸಾಕಾರಗೊಂಡಿಲ್ಲ. ಏಕೆಂದರೆ ವಿಮೋಚನಾ ಪ್ರಾಕಾಶನ ಕ್ರೀಯಾಶೀಲ ಶಕ್ತಿಯಾದ ಶ್ರೀ ವ್ಹಿ. ಎಸ್. ಮನವಾಡೆಯವರನ್ನು ಕಳೆದುಕೊಂಡಿದ್ದು ಸಂಘಕ್ಕೆ ತುಂಬಲಾರದ ನಷ್ಟವಾಗಿದೆ. ಆದರೂ ಸಹ ವಿಮೋಚನಾ ಪ್ರಕಾಶನ ಗ್ರಂಥ ಪ್ರಕಟಣೆಯನ್ನು ಮುಂದುವರೆಸಿದೆ ಎಂಬುದು ಸಂತಸದ ಸಂಗತಿ. ಈ ಪ್ರಸಾರಂಗವು ಇಲ್ಲಿಯವರೆಗೆ ೫೯ ಗ್ರಂಥ ಕುಸುಮಗಳನ್ನು ಓದುಗರಿಗೆ ಅರ್ಪಣೆ ಮಾಡಿದೆ. ವಿಮೋಚನಾ ಪ್ರಕಾಶನದ ಗ್ರಂಥಗಳ ಯಾದಿಯು ಈ ಕೆಳಗಿನಂತಿದೆ.

**ವಿಮೋಚನಾ ಪ್ರಸಾರಂಗದ ಪ್ರಕಟಣೆಗಳು :**

| | | | |
|---|---|---|---|
| ೧) | ವಿಮೋಚನೆ ವಿವೇಚನೆ | ಶ್ರೀ ವ್ಹಿ. ಎಸ್. ಮನವಾಡೆ | ೧೯೮೫ |
| ೨) | ವಿಮೋಚನಾ ಜ್ಯೋತಿ | ಶ್ರೀ ವ್ಹಿ. ಎಸ್. ಮನವಾಡೆ | ೧೯೮೭ |
| ೩) | ಮುಳ್ಳುದಾರಿಯಲ್ಲಿ ಬಿರಿದ ಹೂಗಳು | ಶ್ರೀ ದು. ನಿಂ. ಬೆಳಗಲಿ | ೧೯೮೯ |
| ೪) | ದೇವದಾಸಿ ಪದ್ಧತಿ ವಿಮೋಚನೆ ಹಾಗೂ ಬಸವಣ್ಣನವರು | ಶ್ರೀಮತಿ ಕಲ್ಯಾಣಮ್ಮ ಲಂಗೋಟಿ | ೧೯೮೯ |
| ೫) | ಬಿನ್ನವತ್ತಳೆ | ಶ್ರೀ ವ್ಹಿ. ಎಸ್. ಮನವಾಡೆ ಮತ್ತು ಶ್ರೀ ಲಕ್ಷ್ಮಣ ಬಳ್ಳೊಳ್ಳಿ | ೧೯೮೯ |

| | | | |
|---|---|---|---|
| ೬) | ಯುಗಪ್ರವರ್ತಕ | ಶ್ರೀ ಹಳೇಪೇಟೆ ಚಿಂತಾಮಣಿ | ೧೯೮೯ |
| ೭) | ಸಾರ್ಥಕ ಸೇವೆಯ ೫ ವರುಷಗಳು | ಶ್ರೀ ವ್ಹಿ. ಎಸ್. ಮನವಾಡೆ | ೧೯೯೦ |
| ೮) | ಶರಣ ಪ್ರಕಾಶ | ಶ್ರೀ ವ್ಹಿ. ಎಸ್. ಮನವಾಡೆ | ೧೯೯೦ |
| ೯) | ಕತ್ತಲೆ ಕಳೆದ ಬೆಳಕು | ಶ್ರೀ ಕೆ. ಎಲ್. ಕುಂದರಗಿ ಮತ್ತು<br>ಶ್ರೀ ಜಿ. ಎಚ್. ಹನ್ನೆರಡುಮಠ | ೧೯೯೧ |
| ೧೦) | ದೇವದಾಸಿ | ಶ್ರೀ ದು. ನಿಂ. ಬೆಳಗಲಿ | ೧೯೯೧ |
| ೧೧) | ಸುಯೋಗ | ಶ್ರೀ ಈಶ್ವರ ಕಾಪಸೆ | ೧೯೯೨ |
| ೧೨) | ಹರಕೆಯ ಹೆಣ್ಣು | ಡಾ. ಕೆ. ಜಿ. ಗುರುಮೂರ್ತಿ | ೧೯೯೨ |
| ೧೩) | ಸೂರ್ಯ ನಮಸ್ಕಾರ | ಶ್ರೀ ಈಶ್ವರ ಕಾಪಸೆ | ೧೯೯೩ |
| ೧೪) | ದೇವದಾಸಿ ಸಂಪ್ರದಾಯ | ಡಾ. ಜೋಗನ್ ಶಂಕರ | ೧೯೯೩ |
| ೧೫) | ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ | ಶ್ರೀ ಎಸ್. ವಾಯ್. ಹಂಜಿ | ೧೯೯೩ |
| ೧೬) | ಸಲೀಂ ಚಾಚಾ | ಶ್ರೀ ಜಯವಂತ ಕಾಡದೇವರ | ೧೯೯೪ |
| ೧೭) | ಪದ್ಮಶ್ರೀ ರತ್ನಪ್ಪ ಕಂಬಾರ | ಶ್ರೀ ಲಕ್ಷ್ಮಣ ಬಳ್ಳೊಳ್ಳಿ | ೧೯೯೫ |
| ೧೮) | ಮಕ್ಕಳಿಗಾಗಿ ಡಾ. ಬಿ. ಆರ್. ಅಂಬೇಡ್ಕರ | ಶ್ರೀ ಜಯವಂತ ಕಾಡದೇವರ | ೧೯೯೫ |
| ೧೯) | ಶರಣರ ಆಂದೋಲನ ಹಾಗೂ<br>ಹೊಸ ಸಮಾಜದ ಪರಿಕಲ್ಪನೆ | ಡಾ. ಎಂ. ಬಿ. ಹೂಗಾರ | ೧೯೯೫ |
| ೨೦) | ದೇವದಾಸಿ: ಒಂದು ಅವಲೋಕನ | ಶ್ರೀ ವ್ಹಿ. ಎಸ್. ಮನವಾಡೆ | ೧೯೯೬ |
| ೨೧) | ಕನ್ನಡ–ಮರಾಠಿ ದಲಿತ ಸಾಹಿತ್ಯ | ಡಾ. ಸರಜೂ ಕಾಟ್ಕರ | ೧೯೯೬ |
| ೨೨) | ಉದರೋಪನಿಷತ್ | ಶ್ರೀ ಮಲ್ಲಿಕಾರ್ಜುನ ಹಲಗಬಾಳಿ | ೧೯೯೬ |
| ೨೩) | ಧರ್ಮ ಮತ್ತು ರಾಜಕೀಯ | ಡಾ. ಕೆ. ಜಿ. ಗುರುಮೂರ್ತಿ | ೧೯೯೬ |
| ೨೪) | ಮತ್ತೊಂದು ಮುಖ | ಶ್ರೀ ಜಿ. ಎಸ್. ವಡಗಾಂವಿ | ೧೯೯೬ |
| ೨೫) | ಬುದ್ಧ ಮತ್ತು ಅವನ ಧರ್ಮ | ಶ್ರೀ ಎನ್. ಕೆ. ನಾಗರಾಜು | ೧೯೯೭ |
| ೨೬) | ಸಿ. ಎಸ್. ಗೋಜೇರ ಅಪೂರ್ವ ೬೦ | ಡಾ. ಪಿ. ಎನ್. ಮಯ್ಯ | ೧೯೯೭ |
| ೨೭) | ಎದೆಹಾಲು | ಶ್ರೀ ಈಶ್ವರ ಕಾಪಸೆ | ೧೯೯೭ |
| ೨೮) | ಶಿವಶರಣೆ ಸೂಳೆ ಸಂಕವ್ವೆ | ಶ್ರೀ ಲಿಂಗಣ್ಣ ಸತ್ಯಂಪೇಟ | ೧೯೯೮ |
| ೨೯) | ಸವದತ್ತಿ ಎಲ್ಲಮ್ಮ ಹಾಗೂ<br>ದೇವದಾಸಿ ಪದ್ಧತಿ | ಡಾ. ಕಮಲಾ ಹಮ್ಮಿಗೆ | ೧೯೯೮ |
| ೩೦) | ಹೂಬುಟ್ಟಿ | ಕುಮಾರಿ ವರ್ಷಾ ಹೂಗಾರ | ೧೯೯೮ |
| ೩೧) | ಬದುಕಲು ಇದೊಂದೇ ದಾರಿ | ಶ್ರೀ ಕೆ. ಬಿ. ಪಡಕೆ | ೧೯೯೮ |
| ೩೨) | ಬೆಳಗಲಿ ಮತ್ತು ಇತರರು | ಡಾ. ಈ. ಎಸ್. ಕಾಪಸೆ | ೧೯೯೮ |
| ೩೩) | ಉತ್ತರ ಕರ್ನಾಟಕದ ಜಾನಪದ<br>ಗೀತಮೇಳಗಳು | ಡಾ. ವೀರೇಶ ಬಡಿಗೇರ | ೧೯೯೯ |
| ೩೪) | ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು | ಶ್ರೀ ಲಕ್ಷ್ಮಣ ನಾಗನೂರ | ೧೯೯೯ |

| | | | |
|---|---|---|---|
| ೩೫) | ನಾ ನಗಂದ್ರ ಹ್ಯಾಂಗ ನಗಲಿ | ಶ್ರೀ ಬಿ. ಆರ್. ಕಾಮಗೋಳ | ೧೯೯೯ |
| ೩೬) | ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು | ಡಾ. ಸರಜೂ ಕಾಟ್ಕರ | ೧೯೯೯ |
| ೩೭) | ಆಯುರ್ವೇದ ಕೈಪಿಡಿ | ಶ್ರೀ ಡಿ. ಬಿ. ಕೊಟಬಾಗಿ | ೧೯೯೯ |
| ೩೮) | ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದಿಯ ಅಧ್ಯಯನ | ಡಾ. ಅರ್ಜುನ ಗೋಳಸಂಗಿ | ೨೦೦೦ |
| ೩೯) | ವ್ಹೇನ್ ಥೋರ್ನ್ಸ್ ಬ್ಲಾಸರ್ವ್ಹ | ಡಾ. ವ್ಹಿ. ಟಿ. ನಾಯಿಕ | ೨೦೦೦ |
| ೪೦) | ಸಂಪ್ರದಾಯದ ಸುಳಿಯಲ್ಲಿ | ಪೂಜ್ಯಶ್ರೀ ಚೆನ್ನಬಸವದೇವರು | ೨೦೦೦ |
| ೪೧) | ಅಂತರಾಳ | ಶ್ರೀ ಸಿ. ಎ. ಇಟ್ನಾಳಮಠ | ೨೦೦೧ |
| ೪೨) | ಹೆಜ್ಜೆಗಳು | ಶ್ರೀ ಸಿ. ಎ. ಇಟ್ನಾಳಮಠ | ೨೦೦೧ |
| ೪೩) | ದೇಹಕ್ಕೊಂದು ಪ್ರದಕ್ಷಿಣೆ | ಡಾ. ವಸಂತ ಕುಲಕರ್ಣಿ | ೨೦೦೧ |
| ೪೪) | ಬಾನಂಗಳ | ಕುಮಾರಿ ವರ್ಷಾ ಪೂಜಾರ | ೨೦೦೨ |
| ೪೫) | ಸಂಚಾರಿ | ಶ್ರೀ ಬಿ. ಎ. ಸನದಿ | ೨೦೦೨ |
| ೪೬) | ಆಹ್ವಾನ | ಶ್ರೀ ಶ್ರೀನಿವಾಸ ಕುಲಕರ್ಣಿ | ೨೦೦೨ |
| ೪೭) | ದೇವರಾಯ | ಡಾ. ಸರಜೂ ಕಾಟ್ಕರ | ೨೦೦೨ |
| ೪೮) | ಹೆಜ್ಜೆ | ಶ್ರೀಮತಿ ಲತಾ ಗುತ್ತಿ | ೨೦೦೪ |
| ೪೯) | ಪ್ರಯೋಜನೆ: ಸುಸ್ಥಿರ ಅಭಿವೃದ್ಧಿಯೆಡೆಗೆ | ಶ್ರೀ ಸುಭಾಷ ಚಿಟಗುಪಕರ | ೨೦೦೪ |
| ೫೦) | ರಿಲಿಜನ್ ಆ್ಯಂಡ್ ಪಾಲಿಟಿಕ್ಸ್ | ಡಾ. ಎ. ಎ. ಮುತಾಲಿಕ ದೇಸಾಯಿ | ೨೦೦೫ |
| ೫೧) | ಶ್ರೀ ಸಂತರಾಮ ವಿಜಯ | ಶ್ರೀ ವ್ಹಿ. ಎಸ್. ಮನವಾಡೆ | ೨೦೦೫ |
| ೫೨) | ಕಾಪಾಡು ಕೂಡಲಸಂಗಮದೇವಾ | ಶ್ರೀ ದು. ನಿಂ. ಬೆಳಗಲಿ | ೨೦೦೬ |
| ೫೩) | ದು. ನಿಂ. ಬೆಳಗಲಿಯವರ ಬದುಕು ಬರಹ: ಒಂದು ಅಧ್ಯಯನ | ಡಾ. ಎಸ್. ಬಿ. ಮಲೋಳಿ | ೨೦೦೭ |
| ೫೪) | ವಿಮೋಚನಾ ಸಂಘ ಎರಡು ದಶಕಗಳ ಅವಲೋಕನ | ಶ್ರೀ ವ್ಹಿ. ಎಸ್. ಮನವಾಡೆ | ೨೦೦೭ |
| ೫೫) | ಇದು ಭಾರತ | ಶ್ರೀ ಸುರೇಶ ವೆಂ. ಕುಲಕರ್ಣಿ | ೨೦೦೭ |
| ೫೬) | ಬಸವಪ್ರಭು: ಬಿ. ಎಲ್. ಪಾಟೀಲ ಅಭಿನಂದನ ಗ್ರಂಥ | ಡಾ. ಎಂ. ಎಂ. ಕಲಬುರ್ಗಿ | ೨೦೦೭ |
| ೫೭) | ಅಥಣಿ ತಾಲೂಕು: ಸಾಹಿತ್ಯ ದರ್ಶನ | ಡಾ. ವ್ಹಿ. ಎಸ್. ಮಾಳಿ | ೨೦೦೮ |
| ೫೮) | ಹಿಂದೂ ಧರ್ಮ (ಯಶಸ್ಸು & ಯಾತನೆ) | ಶ್ರೀ ಎಸ್. ಕೆ. ಕುಲಕರ್ಣಿ ಅನು: ಶೇಷಗಿರಿ ಹಾರನಹಳ್ಳಿ | ೨೦೦೯ |
| ೫೯) | ಕೈಲಾಸ–ಮಾನಸ | ಶ್ರೀ ವೆಂಕಟೇಶ ಮಾಚಕನೂರ | ೨೦೧೦ |

ಶ್ರೀಗಂಧದ ಪರಿಮಳದಂತ ಸುವಾಸನೆ ಭರಿತವಾದ ಕೃತಿಗಳನ್ನು ಈ ಪ್ರಕಾಶನವು ಪ್ರಕಾಶಿಸುತ್ತಾ ಬಂದಿದೆ ಎಂಬುದು ಹೆಮ್ಮೆಯ ವಿಷಯವಾಗಿದೆ.

## ಅಧ್ಯಾಯ – ೪ :

# ವಿಮೋಚನಾ ಪ್ರಕಾಶನ ಪದ್ಯ ಸಾಹಿತ್ಯ

| | | | | |
|---|---|---|---|---|
| ಅ) | ನಗಂದ್ರ ನಾ ಹ್ಯಾಂಗ ನಗಲಿ | – | ಕವನ ಸಂಗ್ರಹ | ಶ್ರೀ. ಬಿ. ಆರ್. ಕಾಮನಗೋಳ |
| ಆ) | ದೇಹಕ್ಕೊಂದು ಪ್ರದಕ್ಷಿಣೆ | – | ಕವನ ಸಂಕಲನ | ಡಾ. ವಸಂತ ಕುಲಕರ್ಣಿ |
| ಇ) | ಬಾನಂಗಳ | – | ಕವನ ಸಂಕಲನ | ಕು. ವರ್ಷಾ ಹೂಗಾರ |

**ನಗಂದ್ರ ನಾ ಹ್ಯಾಂಗ ನಗಲಿ :**

ಶ್ರೀ ಬಿ. ಆರ್. ಕಾಮನಗೋಳ ಅವರು ರಚಿಸಿದ ಕವನ ಸಂಕಲನ "ನಗಂದ್ರ ನಾ ಹ್ಯಾಂಗ ನಗಲಿ" ಎಂಬ ಸುಂದರವಾದ ಅರ್ಥಗರ್ಭಿತವಾದ ಸಾಲುಗಳಿಂದ ಹಿಡಿದಿರುವ ಈ ಸಂಕಲನದಲ್ಲಿ ಕವಿಯು ತನ್ನಲ್ಲಿ ಗಾಡವಾಗಿ ಕಾಡುತ್ತಿರುವ ಸಮಸ್ಯೆಯನ್ನು ಈ ಕವನ ಸಂಕಲನದ ಮೂಲಕ ಹೊರಹಾಕಿ ಅದಕ್ಕೆ ಪರಿಹಾರ ಕಂಡುಕೊಳ್ಳಲು ಪ್ರಯತ್ನ ಮಾಡಿದ್ದಾರೆ.

ಇಲ್ಲಿ ಕವಿಯು ದೀನದಲಿತರ ಹಾಗೂ ದುರ್ಬಲರ ಮೇಲೆ ನಾನಾ ಕಾರಣಗಳಿಂದಾಗಿ ನಡೆಯುವ ಶೋಷಣೆಯನ್ನು ವಿವಿಧ ಮುಖಗಳಿಂದ ಚಿತ್ರಿಸಿದ ಚಿತ್ರಣಗಳು ಕಂಡುಬರುತ್ತವೆ. ಹಿಂದಿನ ಕಾಲದಲ್ಲಿ ಯಾವ ರೀತಿಯಲ್ಲಿ ದಲಿತರ ಶೋಷಣೆಯನ್ನು ಮಾಡುತ್ತಿದ್ದರೋ, ಅದೇ ರೀತಿಯಲ್ಲಿ ಆಧುನಿಕ ಕಾಲದಲ್ಲಿಯು ಶೋಷಣೆ ಎಂಬ ಮಹಾಮಾರಿಯು ಮುಂದುವರಿದಿದೆ ಎಂಬುದನ್ನು ಕವಿಯು ತನ್ನ ಕವಿತೆಯ ಮೂಲಕ ಸಮಾಜದಲ್ಲಿನ ಜನರ ಕಣ್ಣು ತೇರಿಸಲು ಪ್ರಯತ್ನ ಮಾಡಿದ್ದಾರೆ.

ಕವಿಯ ಪ್ರಕಾರ ಎಂತಹ ವ್ಯಕ್ತಿಗಳು ಶೋಷಣೆಗೆ ಒಳಗಾಗುತ್ತಾರೆ ಎಂಬುದನ್ನು ತಮ್ಮದೇ ಆದ ಒಂದು ಹೊಸ ಕಲ್ಪನೆಯನ್ನು ನೀಡುತ್ತಾರೆ. "ಮುಗ್ಧತೆ" ದಲಿತರನ್ನು ಬಲಿ ತೆಗೆದುಕೊಳ್ಳುವ ಮುಖ್ಯ ಕಾರಣ ಎಂಬುದನ್ನು ಕವಿ ಊಹಿಸುತ್ತಾರೆ. ಈ ಒಂದು ಅಂಶದಿಂದ ಅವರ ಹೊಸ ಸಂವೇದನೆಗೆ ಸಾಕ್ಷಿಯಾಗಿದೆ ಎಂಬುದನ್ನು ತಿಳಿಯಬಹುದು. ಸ್ವಾತಂತ್ರ್ಯ ಸಿಕ್ಕು ಐವತ್ತು (೫೦) ವರ್ಷಗಳು ಕಳೆದರು ಸಹ ನಮ್ಮ ಮಧ್ಯದಲ್ಲಿ ಇನ್ನು ಅನೇಕ ಸಮಸ್ಯೆ ಹಾಗೆಯೇ ಜೀವಂತವಾಗಿರುವುದನ್ನು ತಮ್ಮ ಕವಿತೆಗಳ ಸಾಲುಗಳ ಮೂಲಕ ಪ್ರಶ್ನಿಸಿದ್ದಾರೆ. ಅದರ ಜೊತೆಯಲ್ಲಿಯೇ ಅತ್ಯಂತ ಕಡುಬಡತನದಲ್ಲಿ ಚಡಪಡಿಸುತ್ತಿರುವ ಅಂಶಗಳನ್ನು

ಮನಸ್ಸಿಗೆ ಹಿಸಿವಿಸಿ ಆದಂತೆ ಈ ಸಂಕಲನದಲ್ಲಿ ಬರುವ "ನಗಂಡ್ರ ನಾ ಹ್ಯಾಂಗ ನಗಲಿ" ಎಂಬ ಕವಿತೆಯ ಚರಣಗಳಲ್ಲಿ ಚಿತ್ರಿಸಿದ್ದಾರೆ.

"ಹಿಟ್ಟಿಲ್ಲದ ಹೊಟ್ಟೆ ಬೆನ್ನಿಗ್ಹತ್ತಿ
ಎಣ್ಣಿ ಬೆಣ್ಣಿ ಕಾಣದ ತಲೆ ಜಿಡ್ಡುಗವಿದು
ಕಣ್ಣು ನೆತ್ತ್ಯಾಗ ಸೇರಿ
ಒಣಗಿದ ಬಡಕಲು ದ್ಯಾಹ ತಿರುಗಿ
ಅನ್ನ ನೀರಿಲ್ಲದೆ ವಿಲಿವಿಲಿ ಒದ್ದಾಡಿ
ಸಾಯುತ್ತಿರುವ ಸಾವಿರಾರ ಮಂದಿಯೊಳಗ
ನಗಂಡ್ರ ನಾ ಹ್ಯಾಂಗ ನಗಲಿ"
(ನಗಂಡ್ರ ನಾ ಹ್ಯಾಂಗ ನಗಲಿ ಪುಟ–೧೭)

ಈ ಕವಿತೆಯ ಪಾದಗಳನ್ನು ನೋಡಿದಾಗ ನಮ್ಮ ನಡುವಿನ ಅನೇಕ ನೈಜ ಸಮಸ್ಯೆಗಳಿಗೆ ನಾವೇ ಸ್ವತಃ ಜವಾಬ್ದಾರರಾಗಿರುವುದನ್ನು ಕವಿ ಈ ಕವಿತೆಯಲ್ಲಿ ಮಾರ್ಮಿಕವಾಗಿ ಮೂಡಿಸಿದ್ದಾರೆ. ಕವಿ ಕಾಮನಗೋಳರವರು ಅತ್ಯಂತ ಬೇಸರದಿಂದ ಇಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆಯನ್ನು ನೋಡಿ ತಾವೇ ಪ್ರಶ್ನೆ ಮಾಡಿಕೊಂಡಿದ್ದಾರೆ. ಆ ಪ್ರಶ್ನೆಗಳಿಗೆ ಉತ್ತರ ಸಿಗದಿದ್ದಾಗ ತಮ್ಮೊಳಗೆ ತಾವೇ ಒಳಗೊಳಗೆ ಕೊರಗುತ್ತಿದ್ದಾರೆ. "ಯಾಕೀ ವೈರತ್ವ?" ಎಂಬ ಕವಿತೆಯ ಶಿರ್ಷಿಕೆಯ ಅಡಿಯಲ್ಲಿ ತಮ್ಮ ಮನದಾಳದ ಮಾತುಗಳನ್ನು ಬಿಚ್ಚಿಡುತ್ತಾರೆ.

"ಓ ನನ್ನ ಭಾಂದವರೇ
ಬದುಕೆಂಬ ಸಂತೆಯಲಿ ಮೂರು ದಿನವಿದ್ದು,
ಶೂನ್ಯದೆಡೆಗೆ ಸಾಗುವ ನಮಗೆ
ದ್ವೇಷ ರೋಷ ಆವೇಶವೇತಕೆ?"
("ಯಾಕೀ ವೈರತ್ವ?" ಪುಟ–೩೬)

ಈ ಒಂದು ಕವಿತೆಯ ಚರಣಗಳು ಅವರಲ್ಲಿಯ ಮಾನವೀಯ ಮೌಲ್ಯಗಳನ್ನು ಪ್ರತಿಬಿಂಬಿಸುತ್ತವೆ ಎಂಬುದನ್ನು ತಿಳಿಯಬಹುದು. ಇಲ್ಲಿನ ಕವಿತೆಗಳ ಮೂಲಕ ಕವಿ ಬಿ. ಆರ್. ಕಾಮನಗೋಳರು ಹಿಂದುಳಿದವರ ಹಾಗೂ ದೀನದಲಿತರ, ಬಡವರ ನೋವಿಗಾಗಿ ಸಹಾನುಭೂತಿ ಸೂಚಿಸುವುದರೊಂದಿಗೆ ನಮ್ಮ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಯಾವ ರೀತಿಯಲ್ಲಿ ಮುಂದೆ ಹೆಜ್ಜೆಯನ್ನಿಡಬೇಕು. ಇದರ ಬಗ್ಗೆ ಕವಿತೆಯ ಚರಣಗಳ ಮೂಲಕ ಸ್ಪಷ್ಟ ಪಡಿಸಿದ್ದಾರೆ ಎಂಬುದನ್ನು ಈ ಕವನ ಸಂಕಲನದಿಂದ ತಿಳಿಯಬಹುದಾಗಿದೆ.

---

"ನಗಂಡ್ರ ನಾ ಹ್ಯಾಂಗ ನಗಲಿ" ಕವನ ಸಂಕಲನ ಲೇಖಕರು ಬಿ. ಆರ್. ಕಾಮನಗೋಳ ೧೯೯೯ ರಲ್ಲಿ ಅಥಣಿಯ ವಿಮೋಚನಾ ಸಂಘದ ಪ್ರಕಟಣೆ.

**ದೇಹಕ್ಕೊಂದು ಪ್ರದಕ್ಷಣೆ :**

ಡಾ॥ ವಸಂತ ಕುಲಕರ್ಣಿಯವರು ರಚಿಸಿರುವ 'ದೇಹಕ್ಕೊಂದು ಪ್ರದಕ್ಷಿಣೆ' ಎಂಬ ಸುಂದರವಾದ ಕವನ ಸಂಕಲನವನ್ನು ವಿಮೋಚನಾ ಸಂಘ ಅಥಣಿಯವರು ಪ್ರಕಟನೆ ಮಾಡಿದ್ದಾರೆ.

ಈ ಕೃತಿಯಲ್ಲಿ ಸಾಮಾಜಿಕ ಪರಿವರ್ತನೆಯ ಸೊಗಡು ಎದ್ದು ಕಾಣುತ್ತದೆ. ಇಂದಿನ ಸಾಮಾಜಿಕ ಆರ್ಥಿಕ ಶೈಕ್ಷಣಿಕ ರಂಗಗಳಲ್ಲಿ ಬದಲಾಗುತ್ತಿರುವ ನಮ್ಮ ಮನೋಭಾವನೆಗಳು ಅದಕ್ಕೆ ತಕ್ಕಂತೆ ನಮ್ಮ ಹೊಸ ಮೌಢ್ಯತನದ ಬಗೆಗಿನ ವಿಡಂಬನೆ ಎಂದು ಕಾಣುತ್ತದೆ. ಆರೋಗ್ಯದ ದೃಷ್ಟಿಯಿಂದ ನಮ್ಮ ಶರೀರವನ್ನು ನಾವೇಷ್ಟು ಅರಿತುಕೊಂಡಿದ್ದೇವೆ ಹಾಗೂ ಇನ್ನೂ ತಿಳಿಯಬೇಕಾದ ಪ್ರಮುಖ ಅಂಶಗಳು ಯಾವವು ಎಂಬುದನ್ನು ಲೇಖಕರು ತಮ್ಮ ಕವಿತೆಯ ಚರಣಗಳ ಮೂಲಕ ಜನರಿಗೆ ತಿಳಿಸಲು ಪ್ರಯತ್ನಪಟ್ಟಿದ್ದಾರೆ. ಗುಡಿ–ಗುಂಡಾರಗಳಿಗೆ, ಗಿಡ–ಮರಗಳಿಗೆ, ಪ್ರದಕ್ಷಿಣೆ ಹಾಕುತ್ತ ಮೂಡ ನಂಬಿಕೆಗಳನ್ನು ತೋರಿಸುವವರನ್ನು ನಾವು ನಿತ್ಯ ಕಾಣುತ್ತೇವೆ. ಆದರೆ ದೇಹದ ಪ್ರದಕ್ಷಿಣೆ ಹಾಕುವವರನ್ನು ಯಾರಾದರೂ ನೋಡಿದ್ದಿರಾ! ಎಂದರೇ ಎಲ್ಲಿಯೂ ಸಿಗುವದಿಲ್ಲ. ಅಂಥಹವರೋಬ್ಬರೆಂದರೆ ಬಿಜಾಪೂರದ ಡಾ॥ ವಸಂತ ಕುಲಕರ್ಣಿಯವರು ನಮ್ಮ ಆರೋಗ್ಯವು ಯಾವ ರೀತಿಯಲ್ಲಿ ಇರಬೇಕು "ಆರೋಗ್ಯವೇ ಭಾಗ್ಯ" ಎಂಬ ಮಂತ್ರವನ್ನು ಎಲ್ಲರು ಯಾವ ರೀತಿ ಜಪಿಸಬೇಕು ಎಂಬುದನ್ನು ಈ ಕೃತಿಯಲ್ಲಿ ಚಿತ್ರಿಸಿದ್ದಾರೆ.

ಈ ಆವೃತ್ತಿಯಲ್ಲಿ ಒಟ್ಟು ೩೦ ಕವಿತೆಗಳನ್ನು ಸೇರೆಹಿಡಿಯಲಾಗಿದೆ. ಒಂದೊಂದು ಕವಿತೆಯು ಒಂದೊಂದು ವಿಶಿಷ್ಟಪೂರ್ಣವಾದ ಮಾಹಿತಿಯನ್ನು ನೀಡುತ್ತವೆ. ಈ ಕೃತಿಯ ಮೊದಲನೆಯ ಕವಿತೆಯಾದ "ದೇಹಕ್ಕೊಂದು ಪ್ರದಕ್ಷಿಣೆ" ಎಂಬ ಕವಿತೆಯಲ್ಲಿ ಬಹಳ ವೈಶಿಷ್ಟ ಪೂರ್ಣವಾಗಿ ವಿವರಣೆ ನೀಡಿದ್ದಾರೆ.

"ಗುಡಿ ಗುಂಡಾರಗಳ
ದೇವರ ಸುತ್ತಲೂ
ತಿರುತಿರುಗಿ ಸುತ್ತು ಹೊಡೆದರೂ
ನನ್ನ ಈ ಪ್ರಶ್ನೆಗೆ
ಉತ್ತರ ದೊರಕದಾಗಿದೆ".

ಕವಿಯು ಜನರು ಯಾವ ರೀತಿಯಲ್ಲಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ ಎಂಬುದರ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಾರೆ. ಪ್ರತಿಯೊಬ್ಬರು ಮೌಢ್ಯತೆಯಿಂದ ನಡೆಯುತ್ತಿದ್ದಾರೆ. ಆದರೆ ತಮ್ಮದೇ ಆದ ದೇಹದ ಪ್ರದಕ್ಷಿಣೆಯನ್ನು ಹಾಕುವವರು ಯಾರು ಇಲ್ಲ ಎಂಬುದನ್ನು ಪ್ರಶ್ನೆ ಹಾಕುವುದರ ಮೂಲಕ ಕವಿತೆಯನ್ನು ಚಿತ್ರಿಸಿದ್ದಾರೆ.

ಜೀವನದ ರಹಸ್ಯ ಅಗಮ್ಯವಾದುದು. ಅಂಗವನ್ನು ತುಂಬಿಕೊಂಡ, ಅಡಗಿಕೊಂಡ ಸ್ನಾಯು ಸಂಚಯನ ಕಾರ್ಯನಿರತ ನಿಷ್ಠೆಯನ್ನು ಕಂಡು ಆಶ್ಚರ್ಯಗೊಂಡಿರುವ ಕವಿಯು ತಮ್ಮ ಕವಿತೆಯ ಸಾಲುಗಳಿಂದ ಓದುಗರನ್ನು ಸ್ವಲ್ಪ ಹೊತ್ತು ಭಾವಲೋಕದತ್ತ ಸೆಳೆಯುತ್ತಾರೆ.

"ಬೇವಿನಿಂದ ಬೆಲ್ಲ
ನೋವು ನಲುವಿನ ಸಾಕ್ಷಾತ್ಕಾರ
ಧರೆಗಿಳಿದ ಮಗುವಿನ ನಗೆಯಲಿ
ತಾಯಿ ಅನುಭವಿಸಿದ ಪ್ರಸವ ವೇದನೆ
ಮಂಗಮಾಯ!"

ಎಂಬ ಸುಂದರವಾದ ಅಗಮ್ಯ ರೀತಿಯಲ್ಲಿ ಕವಿತೆಗಳ ರಚನೆಯನ್ನು ಮಾಡಿದ್ದಾರೆ. ಒಬ್ಬ ತಾಯಿಯು ಹರುವ (ಹಡೆಯುವ) ಸಮಯದಲ್ಲಿ ನೋವನ್ನು ತಡೆಯಲಾರದೆ ಯಾವ ರೀತಿ ತನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಎಂಬುದನ್ನು ಚಿತ್ರಿಸಲಾಗಿದೆ. ಹಾಗೇಯೆ ತಾಯಿಯು ಹೇಗೆ ಅವಿಸ್ಮರಣೀಯವಾಗಿ ಸದಾ ಉಳಿಯುತ್ತಾಳೆ ಎಂಬುದನ್ನು "ನನ್ನ ಅವ್ವಾ" ಎಂಬ ಕವಿತೆಯ ಸಾಲುಗಳ ಮೂಲಕ ಚಿತ್ರಿಸಿದ್ದಾರೆ.

"ನಾವಿಟ್ಟ ಹೆಜ್ಜೆಗಳು ನಿನ್ನದೇ ರೂಪ
ಅಹುದು ನಾವೆಲ್ಲರೂ ತಾಯಿಯ ಪ್ರತಿರೂಪ
ಕರುಳಿನ ಕುಡಿಗಳು".

ಆಕೆ ಜೀವನದ ಭೂಮಿ ಮರಿ ಮಕ್ಕಳ ಪಡೆದು ಮನೆತನ ಮುಂದುವರಿಸಲು ಬಂದವಳು ತ್ಯಾಗದ ಪ್ರತಿಯ ಖಣಿ: ಕುಟುಂಬದ ಗಿಣಿ ಅಂತೆಯೇ ತಾಯಿ ದೇವರು. ಅವಳೇ ದೇವರಿಗೆ ಸಮಾನಳು.

"ತುಂಬಿದ ಮೌಗ ಗರ್ಭದಲ್ಲಿ
ಚೇತನದ ಭ್ರೂಣ ಬೆಳೆದು
ಸೃಷ್ಟಿಯ ಕ್ರಿಯೆಯೊಂದು
ಭೂಮಿಗೆ ಇಳಿದುದು ಕಂಡು"
(ಮೌನದ ಅವಸ್ಥೆಗಳು ಪುಟ-೧೧)

ಕವಿಯು ಸ್ವತಃ ವೈದ್ಯರಾದುದರಿಂದ ಪ್ರಸೂತಿ ಶಾಸ್ತ್ರದ ಸಮಯದಲ್ಲಿನ ರಹಸ್ಯ ಕೌತುಕಗಳನ್ನು ಅಭೇದ್ಯ ಕೋಟೆಗಳಾಗಿ ಕಂಡಿರುವುದನ್ನು ಮನ ಬಿಚ್ಚಿ ತೆರೆದಿಟ್ಟಿದ್ದಾರೆ. ಮನಸ್ಸಿನ ಆಳವನ್ನು ಶಾಂತಿಯ ನೆಲೆಯನ್ನು ಅದರ ಮಹತ್ವವನ್ನು ಕುರಿತು "ನನ್ನ ಪ್ರತಿಬಿಂಬ" ಎಂಬ ಕವಿತೆಯಲ್ಲಿ ಚಿಂತನೆಗೈದಿದ್ದಾರೆ.

"ಮನ-
ಕದಡಿದ ಸರೋವರ
ನನ್ನ ಪ್ರತಿಬಿಂಬ
ಅಂಕುಡೊಂಕು-ಅಕರಾಳ-ವಿಕರಾಳ
ಈಗ ಬಿಂಬವು ಸರೋವರವು ಬೇರೆ ಬೇರೆ
ಗಹಗಹಿಸಿ ನಕ್ಕೆ
ದುಃಖಿಸಿದೆ.
ಒಂದು ಬಾರಿ 'ಮೌನ' ಲೋಕಕ್ಕೆ ಲೋಕಕ್ಕೆ ಜಿಗಿದೆ
ಆದರೂ ಅದೇ ರೂಪ- ಅದೇ ವಿಕಾರ"
("ನನ್ನ ಪ್ರತಿಬಿಂಬ" ಪುಟ-೩೩)

ಮನಸ್ಸು ಎಂಬುದು ಅದ್ಭುತವಾದುದು. ಅದು ಯೋಚಿಸಿದಷ್ಟು ಆಳ. ಅಗಲ ಹರಿವು ಸ್ಥಾನಮಾನ ವಿಸ್ತಾರ ಸಂತರು ಮಾನಸ ಸರೋವರ ಎಂದರು. ಮಂಗ್ಯಾನ ಮನಸ್ಸು ಎಂದರು, ಮಗುವಿನಂತೆ ಸಂಭಾಳಿಸಬೇಕೆಂದರು ಶರಣರು. ಈ ಕೃತಿಯಲ್ಲಿಯು ಸಹ ಕವಿಯು ಚಿಂತನಾತ್ಮಕ ವೇದಿಕೆಯನ್ನು ಸೃಷ್ಟಿಸಿದ್ದಾನೆ. ಎಂಬುದನ್ನು ಎಲ್ಲ ಕವಿತೆಗಳಿಂದ ಮನಗಾನಬಹುದು. ಅಷ್ಟೊಂದು ಮೌಲ್ಯಯುತ ಮಹತ್ವಪೂರ್ಣವಾದ ಕವಿತೆಗಳನ್ನು ಚಿತ್ರಿಸಿದ್ದಾರೆ.

**ಬಾನಂಗಳ :**

ಮಕ್ಕಳು ಕಣ್ಣು ತುಂಬ ಕನಸುಗಳನ್ನು ತುಂಬಿಕೊಂಡವರು. ಅವರ ಮನಸ್ಸು ರಮ್ಯ ಕಲ್ಪನೆಗಳಿಂದ ಹಾಗೂ ಕುಸುಮಕ್ಕಿಂತ ಕೋಮಲವಾದ ಮೃದುವಾದ ಮನಸ್ಸುಗಳ ಹೃದಯದವರು ಮಕ್ಕಳು ಇಂತಹ ನಿಟ್ಟಿನಲ್ಲಿ ಕುಮಾರಿ ವರ್ಷಾ ಹೂಗಾರ ರಚಿಸಿದ "ಬಾನಂಗಳ" ಎಂಬ ಸುಂದರವಾದ ಕವನ ಸಂಕಲನ ಪ್ರತಿಯೊಬ್ಬರ ಮನಮುಟ್ಟುವಂತೆ ರಚಿಸಿ ಕೀರ್ತಿಗೆ ಪಾತ್ರವಾದ ಪುಟ್ಟ ಬಾಲಕಿಯ ರಚನೆಯ ಸಾಲುಗಳು ಅತ್ಯಂತ ಅದ್ಭುತವಾಗಿವೆ. ಈ ಸಂಕಲನದಲ್ಲಿ ಸೂರ್ಯ, ಚಂದ್ರ, ತಾರೆ, ಹಕ್ಕಿ, ಮುಗಿಲು, ಮೋಡ, ಬೆಳಕು, ರೈತ, ಪ್ರಾಣಿ, ಗಿಡಮರ, ಹೂವು, ಹಣ್ಣು, ಶಾಂತಿ ಇತ್ಯಾಧಿಗಳನ್ನು ಕುಮಾರಿ ತಾನು ಕಂಡು ಅರಿತುಕೊಂಡು ಅನುಭವಿಕ ವ್ಯಕ್ತಿಗಳಂತೆ ವರ್ಷಾ ಪ್ರತಿಯೊಂದರ ಮೇಲೂ ಅದ್ಭುತವಾದ ಕವನಗಳನ್ನು ರಚಿಸಿದ್ದಾಳೆ.

"ಚಂದ್ರನಿಗೂ ಹೆದರಿಕೆಯೇ?" ಎಂಬ ಸುಂದರವಾದ ಕವಿತೆಯ ಸಾಲುಗಳು ಮಗ್ಧಮಗುವಿನ ಮನಸ್ಸಿನಲ್ಲಿ ಎಂತಹ ಅದ್ಭುತವಾದ ಆಲೋಚನೆಗಳು ಮೂಡುತ್ತವೆ ಎಂಬುದನ್ನು ಈ ಚಿಕ್ಕ ಕವಿತೆಯಿಂದ ತಿಳಿಯಬಹುದು. ಹಾಗೆಯೇ ಮುಂದುವರಿದ ಬಾಲಕಿ "ಹೀಗಾದರೆ ಹೇಗೆ?" ಎಂಬ ಕವಿತೆಯಲ್ಲಿ

---

"ದೇಹಕ್ಕೊಂದು ಪ್ರದಕ್ಷಿಣೆ" ಕವಿ ಡಾ॥ ವಸಂತ ಕುಲಕರ್ಣಿ ೨೦೦೧ ರಲ್ಲಿ ವಿಮೋಚನಾ ಸಂಘ ಅಥಣಿ.

ಸೃಷ್ಟಿಯಲ್ಲಿಯ ಪ್ರತಿಯೊಂದು ಅದ್ಭುತಗಳ ಬಗ್ಗೆ ತನ್ನನ್ನು ತಾನೇ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕಿ, ತನ್ನ ಪ್ರತಿಭೆಯನ್ನು ವ್ಯಕ್ತಪಡಿಸಿದ್ದಾಳೆ ಎಂಬುದು ಕಂಡುಬರುತ್ತದೆ. 'ಅಜ್ಜಿಯ ಮರೆಯು' ಕವಿತೆಯಲ್ಲಿ ವಯಸ್ಸಾದ ವ್ಯಕ್ತಿಗಳು ತಾವು ಯಾವ ರೀತಿಯಿಂದ ತಪ್ಪುಗಳನ್ನು ಮಾಡುತ್ತಾರೆ. ಅವರ ಅಚಾತುರ್ಯದಿಂದ ಎಂತಹ ಘಟನೆಗಳು ನಡೆಯುತ್ತವೆ. ಅಂತಹ ಘಟನೆಗಳಿಂದ ಮಕ್ಕಳು ಎಷ್ಟೊಂದು ಸಂತೋಷಪಡುತ್ತಾರೆ ಎಂಬುದನ್ನು ಸೌಮ್ಯ ರೀತಿಯಲ್ಲಿ ರಚಿಸಲಾಗಿದೆ.

ಬಾನಂಗಳ ಎಂಬ ಈ ಕಿರುಕವನ ಸಂಕಲನವು ಪ್ರತಿಯೊಂದು ಮಗುವು ಸೃಷ್ಟಿಯ ಬಗ್ಗೆ ಯಾವ ರೀತಿಯಲ್ಲಿ ವಿಚಾರ ಮಾಡುತ್ತೆ ಹಾಗೂ ಸೂರ್ಯ, ಚಂದ್ರ, ಆಕಾಶ, ಭೂಮಿ, ನೀರು, ಮೋಡದ ಬಗ್ಗೆ ಬೇರೆ ಬೇರೆ ರೀತಿಯಿಂದ ಊಹೆಯನ್ನು ಮಾಡಿಕೊಂಡು ತನ್ನ ಬಾಲ್ಯ ಜೀವನವನ್ನು ಕಳೆಯಬಹುದು ಎಂಬುದನ್ನು ಕುಮಾರಿ ವರ್ಷಾ ಹೂಗಾರ ಅವಳು ಸುಂದರವಾಗಿ ರಚಿಸಿ ಸಮಾಜದಲ್ಲಿಯ ಪುಟ್ಟ ಮಕ್ಕಳಿಗೆ ಮಾದರಿಯಾಗಿದ್ದಾಳೆಂಬುದು ಈ ಕವನ ಸಂಕಲನದಿಂದ ತಿಳಿಯಬಹುದು.

---

"ಬಾನಂಗಳ" ಲೇಖಕರು ವರ್ಷಾ ಹೂಗಾರ ೨೦೦೨ ರಲ್ಲಿ ವಿಮೋಚನಾ ಸಂಘ ಅಥಣಿ.

# ಅಧ್ಯಾಯ - ೫ :

# ವಿಮೋಚನಾ ಪ್ರಕಾಶನ ಗದ್ಯ ಸಾಹಿತ್ಯ

## ಅಧ್ಯಾಯ – ೫ :

# ವಿಮೋಚನಾ ಪ್ರಕಾಶನ ಗದ್ಯ ಸಾಹಿತ್ಯ

### ೧) ಸೃಜನಶೀಲ ಸಾಹಿತ್ಯ

| | | | |
|---|---|---|---|
| ೧.೧) | ಸಲೀಂ ಚಾಚಾ | – ಕಥಾ ಸಂಕಲನ | ಶ್ರೀ ಜಯವಂತ ಕಾಡದೇವರ |
| ೧.೨) | ಹೆಜ್ಜೆ | – ಕಾದಂಬರಿ | ಶ್ರೀಮತಿ ಲತಾ ಗುತ್ತಿ |
| ೧.೩) | ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು | – ನಾಟಕ | ಶ್ರೀ ಲಕ್ಷ್ಮಣ ನಾಗನೂರ |
| ೧.೪) | ಕೈಲಾಸ ಮಾನಸ | – ಪ್ರವಾಸ ಕಥನ | ಶ್ರೀ ವೆಂಕಟೇಶ ಮಾಚಕನೂರ |
| ೧.೫) | ದೇಶಭಕ್ತ ರತ್ನಪ್ಪ ಕಂಬಾರ | – ವ್ಯಕ್ತಿಚಿತ್ರಣ | ಶ್ರೀ ಲಕ್ಷ್ಮಣ ಬಳ್ಳೊಳ್ಳಿ |

### ೨) ಸೃಜನೇತರ ಸಾಹಿತ್ಯ

| | | | |
|---|---|---|---|
| ೨.೧) | ಯುಗ ಪ್ರವರ್ತಕ | – ವಿಮರ್ಶೆ ಚಿಂತನ | ಶ್ರೀ ಹಳೇಪೇಟೆ ಚಿಂತಾಮಣಿ |
| ೨.೨) | ಹರಕೆಯ ಹೆಣ್ಣು | – ಸಂಶೋಧನಾ ಪ್ರಬಂಧ | ಡಾ. ಕೆ. ಜಿ. ಗುರುಮೂರ್ತಿ |
| ೨.೩) | ಧರ್ಮ ಮತ್ತು ರಾಜಕೀಯ | – ಸಂಶೋಧನಾ ಪ್ರಬಂಧ | ಡಾ. ಕೆ. ಜಿ. ಗುರುಮೂರ್ತಿ |
| ೨.೪) | ಸವದತ್ತಿ ಯಲ್ಲಮ್ಮ ಹಾಗೂ ದೇವದಾಸಿ ಪದ್ಧತಿ | – ಸಂಶೋಧನಾ ಪ್ರಬಂಧ | ಡಾ. ಕಮಲಾ ಹೆಮ್ಮಿಗೆ |
| ೨.೫) | ಉತ್ತರ ಕರ್ನಾಟಕದ ಜಾನಪದ ಮೇಳಗಳು | – ಸಂಶೋಧನಾ ಪ್ರಬಂಧ | ಡಾ. ವೀರೇಶ ಬಡಿಗೇರ |
| ೨.೬) | ದು. ನಿಂ. ಬೆಳಗಲಿ– ಬದುಕು–ಬರಹ | ಸಂಶೋಧನಾ ಪ್ರಬಂಧ | ಡಾ. ಎಸ್. ಬಿ. ಮಲೋಳಿ |
| ೨.೭) | ಬಸವಪ್ರಭು | – ಅಭಿನಂಧನ ಗ್ರಂಥ | ಡಾ. ಎಂ. ಎಂ. ಕಲಬುರ್ಗಿ |
| ೨.೮) | ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು | – ಕನ್ನಡ ಅನುವಾದ | ಡಾ. ಸರಜೂ ಕಾಟ್ಕರ |
| ೨.೯) | ಸಂಚಾರಿ | – ಅನುವಾದ | ಶ್ರೀ ಬಿ. ಎ. ಸನದಿ |

## ೧) ಸೃಜನಶೀಲ ಸಾಹಿತ್ಯ

| | | | |
|---|---|---|---|
| ೧.೧) | ಸಲೀಂ ಚಾಚಾ | – | ಕಥಾ ಸಂಕಲನ |
| ೧.೨) | ಹೆಜ್ಜೆ | – | ಕಾದಂಬರಿ |
| ೧.೩) | ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು | – | ನಾಟಕ |
| ೧.೪) | ಕೈಲಾಸ ಮಾನಸ | – | ಪ್ರವಾಸ ಕಥನ |
| ೧.೫) | ದೇಶಭಕ್ತ ರತ್ನಪ್ಪ ಕಂಬಾರ | – | ವ್ಯಕ್ತಿಚಿತ್ರಣ |

### ೧.೧) ಸಲೀಂ ಚಾಚಾ :

ಜಯವಂತ ಕಾಡದೇವರು ರಚಿಸಿರುವ "ಸಲಿಂ ಚಾಚಾ" ಎಂಬ ಸುಂದರವಾದ ಕಿರುಹೊತ್ತಿಗೆಯು ಮಕ್ಕಳಲ್ಲಿ ಭಾವೈಕ್ಯತೆಯನ್ನು ಮೂಡಿಸುವಂತಹ ಮನಸ್ಸಿಗೆ ಹಿತವನ್ನು ನೀಡುವಂತಹ ಸುಂದರವಾದ ಹಾಗೂ ಸರಳವಾದ ಕಥೆಗಳನ್ನು ಈ ಹೊತ್ತಿಗೆಯಲ್ಲಿ ನಿರೂಪಿಸಿದ್ದಾರೆ.

'ಸಲಿಂ ಚಾಚಾ' ಎಂಬ ಮುಸಲ್ಮಾನ ವ್ಯಕ್ತಿಯು ಯಾವ ರೀತಿಯಲ್ಲಿ ಸೌಜನ್ಯವನ್ನು ವ್ಯಕ್ತಪಡಿಸಿದವನು ಎಂಬುದನ್ನು ನಾವು ಈ ಕಥೆಯಲ್ಲಿ ತಿಳಿಯಬಹುದು. ಬೆರಳೆನಿಕೆಯಷ್ಟು ಕುಟುಂಬ ಹೊಂದಿದ ಒಂದು ಸುಂದರವಾದ ಹಳ್ಳಿ ಅದು. ಅಲ್ಲಿ ಕೇವಲ ಒಂದೇ ಒಂದು ಮನೆ ಮಾತ್ರ ಚಾಚಾ ಅವರದಾಗಿತ್ತು. ಆ ಹಳ್ಳಿಯಲ್ಲಿ ಚಾಚಾ ಎಂಬ ವ್ಯಕ್ತಿಯು ಎಲ್ಲರಿಗೂ ಬೇಕಾದವನಾಗಿದ್ದನು. ಎಲ್ಲರೂ ಅವನನ್ನೂ ಪ್ರೀತಿಯಿಂದ ಕಾಣೂತ್ತಿದ್ದರು. ಇವನು ಸಹ ಎಲ್ಲರನ್ನು ಪ್ರೀತಿ ವಿಶ್ವಾಸದಿಂದ ಕಾಣುತ್ತಿದ್ದನು. ಆ ಹಳ್ಳಿಯ ಪ್ರತಿಯೊಂದು ಕೆಲಸ ಕಾರ್ಯದಲ್ಲಿ ಚಾಚಾ ಮುಂದೆ ನಿಂತು ತಾನೇ ನಡೆಸಿಕೋಡುತ್ತಿದ್ದನು. ಆ ಹಳ್ಳಿಯಲ್ಲಿ ತಂದೆ–ತಾಯಿ ತೀರಿಕೊಂಡು ಅಜ್ಜಿಯ ಜೊತೆಯಲ್ಲಿ ಒಬ್ಬ ಪುಟ್ಟಮಟಾಣಿ ವಾಸವಾಗಿದ್ದ. ಅವರದು ತುಂಬಾ ಬಡತನದ ಕುಟುಂಬ ಒಂದು ದಿನ ಅಜ್ಜಿಯು ಸಹ ಆರೋಗ್ಯಕ್ಕೆ ತುತ್ತಾಗಿ ತೀರಿಕೊಂಡಳು. ಆಗ ಗೋಪಾಲ ಎಂಬ ಮಗು ಅನಾಥವಾಯಿತು. ಆವಾಗ 'ಸಲಿಂ ಚಾಚಾ' ಆ ಮಗುವನ್ನು ತೆಗೆದುಕೊಂಡು ತನ್ನ ಸ್ವತಃ ಮಗುವಿನಂತೆ ಸಾಕಿಸಲುಹಿ ದೊಡ್ಡವನ್ನನಾಗಿ ಮಾಡಿ ಅವನನ್ನು ಎಂ.ಎ.ವರೆಗೆ ಶಾಲೆಯನ್ನು ಕಲಿಸಿ ಅವನಿಗೆ ನೌಕರಿಯನ್ನು ಹಿಡಿಸಿ, ಅವನನ್ನು ಸಮಾಜದಲ್ಲಿ ಒಬ್ಬ ಒಳ್ಳೆಯ ವ್ಯಕ್ತಿಯನ್ನಾಗಿ ಮಾಡುವುದರಲ್ಲಿ ಬಹಳ ಪರಿಶ್ರಮವಹಿಸುತ್ತಾನೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಸಮಾಜದಲ್ಲಿ ಬೇರೆ ಬೇರೆ ವರ್ಗದ ಜನರು ಇರುತ್ತಾರೆ. ಆದರೆ ಮಾನವೀಯ ಮೌಲ್ಯಗಳನ್ನು ಮೆರೆಯುವ, ಸೌಜನ್ಯವನ್ನು ತೋರಿಸುವ ವ್ಯಕ್ತಿಗಳು ಬಹಳ ವಿರಳ. ಆದ್ದರಿಂದ 'ಸಲಿಂ ಚಾಚಾ' ನಂತಹ ವ್ಯಕ್ತಿಗಳು ಸಮಾಜದಲ್ಲಿ ಇದ್ದರೆ ಉತ್ತಮವಾದ ಮಾದರಿ ಸಮಾಜವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ ಎಂಬುದು ತಿಳಿಯುತ್ತದೆ.

ಎರಡನೆಯ ಕಥೆಯಲ್ಲಿ ಭಗವಂತ ಮಾಸ್ತರ ಎಂಬ ಸುಂದರವಾದ ಕಥೆಯು ಮೂಡಿಬಂದಿದೆ. ಹೋಸುರ ಎಂಬ ಹಳ್ಳಿಗೆ ಒಬ್ಬ ಮಾಸ್ತರನು ವರ್ಗವಾಗಿ ಬರುತ್ತಾನೆ. ಅವನು ಜಾತಿಯಿಂದ ಹರಿಜನ

ಹೀಗಾಗಿ ಅವನಿಗೆ ಆ ಊರಿನಲ್ಲಿ ಯಾರೊಬ್ಬರು ಮನೆ ಬಾಡಿಗೆಯನ್ನು ಕೋಡುವುದಿಲ್ಲ. ಆದರೆ ಊರಿನ ಸ್ವಾಮಿಗಳ ಮಗ ಮಾತ್ರ ಅವರನ್ನು ತುಂಬಾ ಪ್ರೀತಿಸುತ್ತಾನೆ. ಅವರ ತೋಟದ ಮನೆಯನ್ನು ಬಾಡಿಗೆಗಾಗಿ ಗುರುಗಳಿಗೆ ಕೋಡುತ್ತಾನೆ. ಇಲ್ಲಿ ನಾವು ತಿಳಿಯಬೇಕಾದುದು ಜಾತಿಯ ಮೌಢ್ಯವನ್ನು ಮರೆತು ಆ ವಿದ್ಯಾರ್ಥಿ ಗುರುಗಳ ಸೇವೆಯನ್ನು ಮಾಡಿ ಮುಂದೆ ಅವನೊಬ್ಬ ಆಯ್.ಪಿ.ಎಸ್. ಅಧಿಕಾರಿಯಾಗುತ್ತಾನೆ. ಈ ಅಂಶದಿಂದ ತಿಳಿಯುವದೆನೆಂದರೆ ಪ್ರತಿಯೊಬ್ಬ ವಿದ್ಯಾರ್ಥಿ ತಮಗೆ ಕಲಿಸಿದ ಗುರುಗಳಿಗೆ ದಾಸನಾಗಿ ನಡೆದರೆ ಅವನೊಬ್ಬ ಸಮಾಜದಲ್ಲಿ ಉತ್ತಮ ಪ್ರಜೆಯಾಗಿ ನಿರ್ಮಾಣವಾಗುತ್ತಾನೆಂಬ ಅಂಶ ಈ ಕಥೆಯಿಂದ ತಿಳಿಯಬಹುದು.

ಹಲವು ಧರ್ಮಗಳ ಸಮಾಜ ನಮ್ಮದು. ಇಲ್ಲಿ ಎಲ್ಲರು ಸಮಾನರು, ಯಾರು ಮೇಲು ಅಲ್ಲಾ, ಯಾರು ಕೀಳು ಅಲ್ಲಾ. ಎಲ್ಲರೂ ಒಂದಾಗಿ ಸಾಗಿಸುವ ಒಂದು ಮಹತ್ವದ ಘಟನೆಯನ್ನು ಲೇಖಕರು ಇಲ್ಲಿ ಕಥೆಯ ಮೂಲಕ ತಿಳಿಸಲು ಪ್ರಯತ್ನಪಟ್ಟ ರೀತಿ ಅತ್ಯಂತ ಸೋಗಸಾಗಿದೆ. ಅಷ್ಟೇ ಯಾಕೆ ಮನಸ್ಸಿಗೆ ಮುಟ್ಟುವಂತೆ ಇಲ್ಲಿ ನಿರೂಪಿಸಿದ್ದಾರೆ. ಆಟವನ್ನು ಆಡುವಾಗ ಎಲ್ಲ ವರ್ಗದ ಜನರು ಅಲ್ಲಿ ಇರುತ್ತಾರೆ. ಅಲ್ಲಿ ಎಲ್ಲರ ಗುರಿಯು ಒಂದೇ ಆಗಿರುತ್ತದೆ. ಆದರೆ ಧರ್ಮಗಳು, ಪ್ರಾರ್ಥನೆಗಳು ಮಾತ್ರ ಬೇರೆ ಬೇರೆ ಎಂಬುದನ್ನು ಲೇಖಕರು ವಿವರಣೆ ನೀಡುತ್ತಾರೆ.

ಸಿದ್ಧಲಿಂಗ ಸ್ವಾಮಿಗಳು ಯಾವ ರೀತಿಯಲ್ಲಿ ತಮ್ಮ ಮಾನವೀಯತೆಯನ್ನು ಮೇರೆದರು ಎಂಬುದನ್ನು ಲೇಖಕರು ನಿರೂಪಿಸುತ್ತಾರೆ. ಪ್ರತಿಯೊಬ್ಬರು ಶ್ರೀಗಳ ಹಾಗೆ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡರೇ ಒಂದು ಉತ್ತಮವಾದ ಸಮಾಜವಾಗುವದರಲ್ಲಿ ಯಾವುದೇ ಸಂದೇಹವಿಲ್ಲ ಎಂಬುದು ಲೇಖಕರ ಅಭಿಪ್ರಾಯ.

"ಸಲಿಂ ಚಾಚಾ" ಎಂಬ ಈ ಕಿರು ಹೊತ್ತಿಗೆಯಲ್ಲಿ ಜಯವಂತ ಕಾಡದೇವರ ಅವರು ಸಾಕಷ್ಟು ಮಾನವೀಯ ಮೌಲ್ಯಗಳನ್ನು ತುಂಬಿರುವ ಹಾಗೂ ಭಾವೈಕ್ಯತೆಯನ್ನು ಸಾರುವಂತ ಸುಂದರ ಕಥೆಗಳನ್ನು ನಿರೂಪಿಸುವುದರಲ್ಲಿ ಅತ್ಯಂತ ಪರಿಶ್ರಮ ಪಟ್ಟಿದ್ದಾರೆ.[೧]

**೧.೨) ಹೆಜ್ಜೆ :**

ಶ್ರೀಮತಿ ಲತಾ ಗುತ್ತಿಯವರು ಬರೆದ "ಹೆಜ್ಜೆ" ಕೃತಿಯನ್ನು ವಿಮೋಚನಾ ಸಂಘ ಅಥಣಿ ಯವರು ೪೮ ನೇ ಪ್ರಕಟಣೆಯಾಗಿ ಹೊರತಂದಿದ್ದಾರೆ. ಇಂದು ಬಹುತೇಕ ದಲಿತ ಕುಟುಂಬದಲ್ಲಿ ದೇವದಾಸಿ ಪದ್ಧತಿ ಕಣ್ಮರೆಯಾಗಿರುವುದೇನೋ ಸರಿ. ಆದರೂ ಮಳೆ ನಿಂತರೂ ಮರದ ಮೇಲಿನ ಹನಿಗಳೂ ನಿಂತಿರುವದಿಲ್ಲವೆಂಬಂತೆ ಕೆಲವೊಂದು ಕುಟುಂಬದಲ್ಲಿ ಇನ್ನೂ ಸಹ ದೇವದಾಸಿ ಪದ್ಧತಿ ಇದೆ ಎಂಬುದರ ಬಗ್ಗೆ ಲೇಖಕಿಯು ವಿಷಾದ ವ್ಯಕ್ತಪಡಿಸುತ್ತಾರೆ.

---

೧. 'ಸಲಿಂ ಚಾಚಾ' : ಲೇಖಕರು – ಜಯವಂತ ಕಾಡದೇವರ : ವಿಮೋಚನಾ ಪ್ರಕಾಶನ ಅಥಣಿ.

ಸಾಮಾಜಿಕವಾಗಿ ಯಾವ ರೀತಿಯಲ್ಲಿ ದಲಿತ ಕುಟುಂಬಗಳಲ್ಲಿ ಆರ್ಥಿಕವಾಗಿ ಭದ್ರತೆಯನ್ನು ಒದಗಿಸಬೇಕು. ಅವರ ಮೌಢ್ಯವನ್ನು ತೊಲಗಿಸಲು ಎಂತಹ ಕಾರ್ಯಗಳನ್ನು ಕೈಗೊಳ್ಳಬೇಕು ಎಂಬುದನ್ನು ಲತಾ ಗುತ್ತಿಯವರು ವಿನೂತನ ಹೆಜ್ಜೆಯೊಂದಿಗೆ ಜನರಿಗೆ ತಿಳಿಸಲು ಉತ್ಸುಕರಾಗಿದ್ದಾರೆ. ಪ್ರಸ್ತುತ 'ಹೆಜ್ಜೆ' ಕಾದಂಬರಿ ಸಾಹಿತ್ಯ ಹಾದಿಯಲ್ಲಿ ಗಟ್ಟಿಯಾಗಿ ಬೇರೂರಿದ ಲಕ್ಷಣಗಳನ್ನು ಹೊಂದಿದೆ. ಈ ಕೃತಿಯಲ್ಲಿ ಸಮಾಜದಲ್ಲಿ ಸಮಸ್ಯೆಯು ಯಾವ ರೀತಿಯಲ್ಲಿ ಕುಡಿಯೊಡೆಯುತ್ತದೆ. ಅವುಗಳನ್ನು ಬಗೆಹರಿಸಲು ಜನರು ಎಂತಹ ಮಾರ್ಗವನ್ನು ಅನುಸರಿಸಬೇಕು ಹಾಗೂ ಸಮಸ್ಯೆಯನ್ನು ಬಗೆಹರಿಯದ ಸಂದರ್ಭದಲ್ಲಿ ಅದಕ್ಕೆ ದೈವೀ ಪ್ರೇರಣೆಯನ್ನು ಒದಗಿಸಿ ನಿಸರ್ಗ ನ್ಯಾಯ ಒದಗಿಸಿಕೊಡುವ ರೀತಿಯು ಅತ್ಯಂತ ರೋಚಕತೆಯಿಂದ ಕೂಡಿದೆ.

ಈ ಕಾದಂಬರಿಯಲ್ಲಿ ಬರುವ ದೇವದಾಸಿ ಸಂಪ್ರದಾಯದ ವಿಶಾಲತೆಯು ಅದರ ಪ್ರಕರತೆಯು ಹಾಗೂ ದಲಿತ ಸಮುದಾಯದಲ್ಲಿನ ನಿಯಮ ಪರಿಪಾಲನೆಗೆ ಅವರು ಕೊಡುವ ಒತ್ತು ಎಲ್ಲವನ್ನು ಸೂಕ್ಷ್ಮವಾಗಿ ಕೃತಿಯಲ್ಲಿ ಬಚ್ಚಿಟ್ಟಿದ್ದಾರೆ. ಮೇಲಜಾತಿಯ ಮುಖಂಡರು ಉಳಿಗಮಾನ್ಯ ಪದ್ಧತಿಯ ಹೆಸರಿನಲ್ಲಿ ದಲಿತರನ್ನು ಯಾವ ರೀತಿಯಲ್ಲಿ ಶೋಷಣೆ ಮಾಡುತ್ತಾರೆಂಬುದನ್ನು ಇಲ್ಲಿ ಮನವರಿಕೆ ಮಾಡಿಕೊಳ್ಳಬಹುದು. ಶ್ರೀಮತಿ ಲತಾ ಗುತ್ತಿಯವರು ದರ್ಪ–ದೌರ್ಜನ್ಯಗಳು ರೀತಿ–ನೀತಿಗಳನ್ನು ಬಹಳಷ್ಟು ಸಹಜವಾದ ರೀತಿಯಲ್ಲಿ ಚಿತ್ರಿಸಿದ್ದಾರೆ.

ಈ ಆವೃತ್ತಿಯಲ್ಲಿ ಬರುವ ಪಾತ್ರದಾರಿಗಳಾದ ನೀಲೂ, ಕೆಂಚ, ಪಾರ್ವತಿ, ಹಿರಿಯ ಗೌಡತಿ, ಸಿದ್ದನಗೌಡ, ದ್ಯಾಮ್ಯಾ, ನಾಗಪ್ಪ, ಕಿರಿಯಗೌಡ ಜಗದೀಶ, ಡಾ॥ ನರ್ಮದಾ ದೇಶಪಾಂಡೆ, ಕಸ್ತೂರಿ, ಮನೋಜ ಎಲ್ಲ ಪಾತ್ರಗಳು ಜೀವಂತಿಕೆಯಿಂದ ಕೂಡಿಬಂದಿವೆ. ಇಂತಹ ವೈಚಾರಿಕತೆಯ ಶಿಕ್ಷಣದಿಂದ ಹೇಗೆ ಮೂಡುತ್ತವೆ. ಅದು ಜನರ ಮೇಲೆ ಯಾವಾಗ ಯಾವ ರೀತಿಯಲ್ಲಿ ಪರಿಣಾಮ ಬೀರುತ್ತದೆ. ಬೇರೆಯಲಿ ಎಂಬುದರ ಬಗ್ಗೆ ಶ್ರೀಮತಿ ಲತಾ ಗುತ್ತಿಯವರು ಬಹಳ ತೀಕ್ಷ್ಣವಾಗಿ ಚಾಣಾಕ್ಷತೆಯಿಂದ ಬರೆದಿದ್ದಾರೆ. ವೈಚಾರಿಕ ನಿಲುವು ಸಮಾಜ ಪರಿವರ್ತನೆಗೆ ಹೇಗೆ ಬೀಜ ಅಂಕುರವಾಗಿ ಸಮಾಜದಲ್ಲಿ ಆಳವಾಗಿ ಬೇರೂರಿವಂತಹ ಜಾತಿ ವೈಷಮ್ಯ, ಮೂಢನಂಬಿಕೆಗಳನ್ನು ದೂರ ಮಾಡುತ್ತದೆ ಎಂಬುದನ್ನು ಸ್ಪಷ್ಟವಾಗಿ ಕೃತಿಯಲ್ಲಿ ನಿರೂಪಿಸಿದ್ದಾರೆ. ಇಂತಹ ವ್ಯವಸ್ಥೆಗೆ ಒಳ್ಳೆಯ ಅಂತ್ಯವಿದೆಯೇ ಅಥವಾ ಇಲ್ಲವೋ ಎಂಬುದನ್ನು ಓದುಗರಿಗೆ ತಿಳಿಸುವ ಸಲುವಾಗಿ ಶ್ರೀಮತಿ ಲತಾ ಗುತ್ತಿಯವರು ವಿನೂತ ಶೈಲಿಯನ್ನು ಈ ಕಾದಂಬರಿಯಲ್ಲಿ ಅಳವಡಿಸಿಕೊಂಡಿದ್ದಾರೆ. ಆದ್ದರಿಂದ ಈ ಕೃತಿಯು ಹೆಚ್ಚು ಮಹತ್ವವನ್ನು ಪಡೆದುಕೊಂಡಿದೆ ಎಂಬುದನ್ನು ತಿಳಿಯಬಹುದು.[೧]

## ೧.೩) ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು :

ಶ್ರೀ ಲಕ್ಷ್ಮಣ ನಾಗನೂರ ಅವರು ರಚಿಸಿದ ನಾಟಕವು ತುಂಬಾ ಸೊಗಸಾಗಿ ಮೂಡಿಬಂದಿದೆ. ಈ ಕಿರುಹೊತ್ತಿಗೆಯಲ್ಲಿ ಹಿಂದುಳಿದ ವರ್ಗದಲ್ಲಿ ಹುಟ್ಟಿದ ದಲಿತ ಮಹಿಳೆಯ ಕರುಣಾಜನಕ ಸ್ಥಿತಿಯನ್ನು ಲೇಖಕರು ಅತ್ಯಂತ ಮಾರ್ಮಿಕವಾಗಿ ವಿವರಿಸಿದ್ದಾರೆ.

---

೧. "ಹೆಜ್ಜೆ" ಕಾದಂಬರಿ ಲೇಖಕಿ ಶ್ರೀಮತಿ ಲತಾ ಗುತ್ತಿ ೨೦೦೪ ರಲ್ಲಿ ವಿಮೋಚನಾ ಸಂಘ ಅಥಣಿ.

ದೃಶ್ಯ ಒಂದು ಮತ್ತು ಎರಡರಲ್ಲಿ ನಾಟಕದ ಕೇಂದ್ರ ಬಿಂದುಗಳಾಗಿ ಬಿಂಬಿತವಾದ ಸೋಮು ಹಾಗೂ ಮಾಲಾಳ ನಡುವೆ ಸಂಭಾಷಣೆಯು ಮೂಡಿಬರುತ್ತದೆ. ಇದರಲ್ಲಿ ಆಗರ್ಭ ಶ್ರೀಮಂತನಾದ ಸೋಮು ಬೇರೆಯವರ ಜೊತೆಯಲ್ಲಿ ಎಷ್ಟೊಂದು ನಯವಿನಯದಿಂದ ನಡೆದುಕೊಳ್ಳುತ್ತಾನೆಂಬುದನ್ನು ಈ ದೃಶ್ಯದಲ್ಲಿ ಕಾಣಬಹುದು. ಅವನು ಎಷ್ಟು ಶ್ರೀಮಂತನಿದ್ದರೂ ದಲಿತ ಮಹಿಳೆಯ ಜೊತೆ ನಡೆದುಕೊಂಡ ರೀತಿಯು ಮಾನವೀಯ ಮೌಲ್ಯಗಳಿಂದ ಕೂಡಿದೆ ಎಂಬುದನ್ನು ನಾವು ತಿಳಿಯಬಹುದು. ಇದರಲ್ಲಿ ಲೇಖಕರು ತಮ್ಮ ಕಲ್ಪನೆಯ ಜೀವನವನ್ನು ತುಂಬಿ ಸಮಾಜದಲ್ಲಿನ ಕೇಲವೊಂದು ಅನಿಷ್ಟಗಳನ್ನು ಹೊಗಲಾಡಿಸಲು ಪ್ರಯತ್ನಪಟ್ಟಿದ್ದಾರೆ.

ದೃಶ್ಯ ಮೂರರಲ್ಲಿ ಆಗರ್ಭ ಶ್ರೀಮಂತನಾದ ದೇವಣ್ಣ ಈತನು ಸೋಮನ ತಂದೆ ಇವನು ಯಾವ ರೀತಿಯಲ್ಲಿ ದಲಿತರ ಶೋಷಣೆಯನ್ನು ಮಾಡುತ್ತಿದ್ದ ಎಂಬುದನ್ನು ಲೇಖಕರು ಈ ಪಾತ್ರದ ಮೂಲಕ ಸಮಾಜಕ್ಕೆ ತಿಳಿಸಲು ಪ್ರಯತ್ನಪಟ್ಟಿದ್ದಾರೆ. ದೇವಣ್ಣನು ಬಡವರಿಗೆ ಕಡಿಮೆ ಹಣವನ್ನು ನೀಡಿ ತನ್ನ ಖಾತೆ ಪುಸ್ತಕದಲ್ಲಿ ಹೆಚ್ಚಿನ ಹಣವನ್ನು ಬರೆದು ಅವರನ್ನು ಕಡೆಯವರೆಗೂ ತನ್ನ ಜೀತದಾಳದಂತೆ ದುಡಿಸಿಕೊಳ್ಳುತ್ತಿರುತ್ತಾನೆ. ಆದರೆ ಈ ವಿಷಯವು ತನ್ನ ಮಗ ಸೋಮನಿಗೆ ಗೊತ್ತಾಗಿ ಆ ಒಂದು ನೀಚ ಕಾರ್ಯಕ್ಕೆ ತೊಡಗದಂತೆ ಕಡಿವಾಣ ಹಾಕಲು ಪ್ರಯತ್ನ ಪಡುತ್ತಾನೆ ಎಂಬುದನ್ನು ಲೇಖಕರು ಈ ದೃಶ್ಯದಿಂದ ಸಮಾಜಕ್ಕೆ ಮನವರಿಕೆ ಮಾಡಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ.

ದೃಶ್ಯ ನಾಲ್ಕರಲ್ಲಿ ದೇವಣ್ಣ ಮತ್ತು ಭೀಮ ಹಾಗೂ ಕೊಕ್ಕಯ್ಯ ಎಂಬ ಮೂರು ಜನರ ಪಾತ್ರಗಳನ್ನು ಲೇಖಕರು ಇಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಕಂಡು ಬರುವ ಅಂಶಗಳೆಂದರೆ ಒಂದು ಸಮಾಜದಲ್ಲಿ ಎಂತಹ ವ್ಯಕ್ತಿಗಳು ಕೂಡಿ, ಎಂತಹ ವಿಷಯಗಳ ಬಗ್ಗೆ ಚರ್ಚೆಯನ್ನು ಮಾಡುತ್ತಾರೆ ಎಂಬುದನ್ನು ನಾವು ಇಲ್ಲಿ ನೋಡಬಹುದು. ಯಾವುದೇ ಒಬ್ಬ ವ್ಯಕ್ತಿ ಸಮಾಜದಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ಮಾಡಬೇಕಾದರೆ ಅವನು ಇಲ್ಲಿ ಯಾವ ವ್ಯಕ್ತಿಗಳ ಸಹಾಯ ಪಡೆಯುತ್ತಾನೆ ಎಂಬುದನ್ನು ಇಲ್ಲಿ ನೋಡಬಹುದು. ಅದನ್ನು ಲೇಖಕರು ತಮ್ಮದೇ ಆದ ಮಾತುಗಳಲ್ಲಿ ಜೀವ ತುಂಬುವುದರಲ್ಲಿ ಯಶಸ್ವಿಯಾಗಿದ್ದಾರೆ.

ದೃಶ್ಯ ಐದರಲ್ಲಿ ಸೋಮು ಶ್ರೀಮಂತ ಹುಡುಗನಾದರೂ ಸಹ ದಲಿತ ಕುಟುಂಬದಲ್ಲಿ ಜನಿಸಿದ ಮಾಲಾಳನ್ನು ಒಲಿಸಿಕೊಳ್ಳಲು ಯಾವ ರೀತಿಯಿಂದ ಉಪಾಯ ಮಾಡುತ್ತಾನೆಂದು ಲೇಖಕರು ಅತ್ಯಂತ ಸೊಗಸಾಗಿ ನಿರೂಪಣೆಯನ್ನು ಮಾಡಿದ್ದಾರೆ.

ಪ್ರವೇಶ ಆರರಲ್ಲಿ ಶ್ರೀಮಂತ ದೇವಣ್ಣ ದಲಿತ ಮಹಿಳೆಯರನ್ನು ಯಾವ ರೀತಿಯಿಂದ ಸೂಳೆಗಾರಿಕೆ ಮಾಡಲು ಪ್ರೇರೆಪಿಸುತ್ತಿದ್ದ ಹಾಗೂ ಇಲ್ಲಿ ಕೇರಿಯಲ್ಲಿರುವ ಹದಿ ಹರೆಯದ ಯುವತಿಯರು ಯಾರ ಮನೆಯಲ್ಲಿದ್ದಾರೆ ಎಂಬುದನ್ನು ರಾಮ ಮತ್ತು ಕೊಕ್ಕಯ್ಯ ಅವರಿಂದ ಮಾಹಿತಿಯನ್ನು ಪಡೆಯುತ್ತಿದ್ದನು. ತದನಂತರ ಅವರ ಮನೆಗೆ ಸಹಾಯ ಮಾಡುವ ನೆಪದಲ್ಲಿ ಹೋಗಿ ಅವರ ಮನೆಯ ಹೆಣ್ಣು ಮಕ್ಕಳನ್ನು ಯಾವ ರೀತಿಯಲ್ಲಿ ವಲಿಸಿಕೊಳ್ಳುತ್ತಿದ್ದ ಎಂಬುದನ್ನು ಕಾಣಬಹುದು.

ಈ ಕಿರು ನಾಟಕದಲ್ಲಿ ಒಟ್ಟಾರೆಯಾಗಿ ಹದಿನೆಂಟು ದೃಶ್ಯಗಳಿದ್ದು ಹದಿನಾಲ್ಕು ಪಾತ್ರಗಳನ್ನು ಒಳಗೊಂಡಿದೆ. ಇದೊಂದು ದೇವದಾಸಿಗೆ ಸಂಬಂಧಪಟ್ಟ ಸಾಮಾಜಿಕ ನಾಟಕವಾಗಿದೆ ಎಂದು ಹೇಳಬಹುದು. ಇದರಲ್ಲಿ ಮುಖ್ಯ ಪಾತ್ರಗಳೆಂದರೆ ದೇವಣ್ಣ, ಸೋಮು, ಕೊಕ್ಕಯ್ಯ, ಭೀಮ, ರಾಮ ಮತ್ತು ಮಾಲಾ ಮೂಕಾಂಬಿಕೆ. ಇಲ್ಲಿ ದಲಿತ ಕುಟುಂಬದಲ್ಲಿ ಹುಟ್ಟಿದ ಮಾಲಾ ಎಂಬ ಯುವತಿಯು ಯಾವ ರೀತಿಯಲ್ಲಿ ಹೋರಾಟ ಮಾಡಿ ಸೋಮು ಎಂಬ ಶ್ರೀಮಂತ ಯುವಕನನ್ನು ಮದುವೆಯಾಗುತ್ತಾಳೆ ಎಂಬುದನ್ನು ಲೇಖಕರು ತುಂಬಾ ಸುಂದರವಾಗಿ ವಿವರಿಸಿದ್ದಾರೆ.[೧]

## ೧.೪) ಕೈಲಾಸ ಮಾನಸ :

'ಶ್ರೀ ವೆಂಕಟೇಶ ಮಾಚಕನೂರ' ಅವರು ರಚಿಸಿರುವ "ಕೈಲಾಸ ಮಾನಸ" ಎಂಬ ಸುಂದರವಾದ ಪ್ರವಾಸ ಕಥನವನ್ನು ವಿಮೋಚನಾ ಸಂಘ ಅಥಣಿಯವರು ೫ ನೇ ಆವೃತ್ತಿಯಾಗಿ ಹೊರತಂದಿದ್ದಾರೆ. ಲೇಖಕರು ಕೈಲಾಸ ಮಾನಸ ಕುರಿತು ಯಾತ್ರಿಯ ಅನುಭವಗಳನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಹಿಮಾಲಯದ ಶಿಖರಗಳಲ್ಲಿ ದರ್ಶನವನ್ನು ಮಾಡಿರುವ ಕೆಲವೊಂದು ಸುಂದರವಾದ ಪರಿಸರದ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಲೇಖಕರು ಅಲ್ಲಿರುವ ಪ್ರತಿಯೊಂದು ಮನಪೂರ್ವಕವಾಗಿ ನೋಡಿ ಆನಂದಿಸಿದ ಕ್ಷಣಗಳನ್ನು ಹಿಡಿದಿಟ್ಟಿದ್ದಾರೆ. ಹಿಮಾಲಯ ಕೇಲವು ಬೆಟ್ಟದ ಪ್ರದೇಶದಲ್ಲಿ ಅದೊಂದು ಸುಂದರವಾದ ಪರ್ವತಶ್ರೇಣಿ. ಇದರಲ್ಲಿ ಒಂಬತ್ತು ನೂರು ಮೀ. ಎತ್ತರದಿಂದ ಎಂಟು ಸಾವಿರ ಮೀಟರಕ್ಕೂ ಹೆಚ್ಚು ಎತ್ತರವರೆಗೆ ಹಬ್ಬಿರುವ ವಿವಿಧ ರೀತಿಯ ಪರ್ವತ ಶ್ರೇಣಿಗಳಿವೆ. ಟಿಬೆಟ್ ತಪ್ಪಲು ಪ್ರದೇಶ ಜಗತ್ತಿನ ತೊಟ್ಟಿಲು ಎಂದು ಕರೆಯಿಸಿಕೊಳ್ಳುತ್ತದೆ. ಇದು ಸಾಮಾನ್ಯವಾಗಿ ೪೦೦೦ ಮೀ ದಿಂದ ೪೯೦೦ ಮೀ ಎತ್ತರದ ಪ್ರದೇಶದಲ್ಲಿ ಹಬ್ಬಿಕೊಂಡಿದೆ. ಹೀಗೆ ಲೇಖಕರು ಅನೇಕ ರೀತಿಯ ವೈವಿಧ್ಯಮಯವಾದ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ.

ನೇಪಾಳದ ರಾಜಧಾನಿ "ಕಠ್ಮಂಡು" ಈ ನಗರವು ತನ್ನ ಸಂಪ್ರದಾಯಗಳನ್ನು ಅಂತರಂಗದಲ್ಲಿಟ್ಟುಕೊಂಡು ಆಧುನಿಕತೆಗೆ ಮುಖಾಮುಖಿಯಾಗಿ ಬೆಳೆಯುತ್ತಿರುವ ನಗರ. ಸುಮಾರು ಒಂಬತ್ತು ಲಕ್ಷ ಜನಸಂಖ್ಯೆಯ 'ಕಠ್ಮಂಡು' ನಗರೀಕರಣದ ಎಲ್ಲ ಒತ್ತಡಗಳೊಂದಿಗೆ ಬೆಳೆಯುತ್ತಿದೆ. ಅಲ್ಲಿರುವ ವಿಶಿಷ್ಟವಾದ ಸಂಪನ್ಮೂಲಗಳು ಯಾವ ರೀತಿಯಲ್ಲಿವೆ ಎಂಬುದನ್ನು ಪ್ರವಾಸದ ಸಮಯದಲ್ಲಿ ಲೇಖಕರು ನೋಡಿ ಅನುಭವಿಸಿದ ಮಾತುಗಳನ್ನು ಈ ಕೃತಿಯಲ್ಲಿ ಹಿಡಿದಿಟ್ಟಿದ್ದಾರೆ. ಅಷ್ಟೇ ಅಲ್ಲದೆ ಕಲೆ, ವಾಸ್ತುಶಿಲ್ಪದ ದೃಷ್ಟಿಯಿಂದಲು ಸಹ ಕಠ್ಮಂಡು ಸುಂದರವಾಗಿದೆ.

ಕೈಲಾಸದ ದಾರಿಯಲ್ಲಿ ಪ್ರವಾಸಿಗರು ಸರತಿಯ ಸಾಲಿನಲ್ಲಿ ನಿಂತುಕೊಂಡು ತಮ್ಮ ಆರೋಗ್ಯ ಮತ್ತು ವೀಸಾಗಳನ್ನು ಪರಿಶೀಲಿಸಿಕೊಂಡು ನಂತರ ಮುಂದೆ ಸಾಗಿದರು. ಅಲ್ಲಿರುವ ಸೃಷ್ಟಿಯ ಸೌಂದರ್ಯವನ್ನು ಸವಿದು, ಕಾಮನಬಿಲ್ಲು ಮೂಡಿದ ದೃಶ್ಯ ಕಣ್ಣಿಗೆ ಕುಕ್ಕುವಂತಿತ್ತು ಎಂಬುದನ್ನು

---

೧. "ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು" (ಕಿರು ನಾಟಕ) ಲೇಖಕರು ಲಕ್ಷ್ಮಣ ಬಿ. ನಾಗನೂರ
ವಿಮೋಚನಾ ಪ್ರಕಾಶನ ಅಥಣಿ.

ಲೇಖಕರು ಹೇಳಿದ್ದಾರೆ. ಹಿಮಾಲಯದ ಸುಂದರ ಪರಿಸರದಲ್ಲಿ ದೈನಂದಿನ ಸಹಜ ನಿಸರ್ಗದಾಟಗಳ ಬಗ್ಗೆ ಹಲವು ರೀತಿಯದು. ಬೃಹದಾಕಾರದ ಬೆಟ್ಟಗಳು, ಅಪಾರ ಹಿಮರಾಶಿ, ಮೋಡಗಳ ಚೆಲ್ಲಾಟ, ಜಲಪಾತಗಳ ಕುಣಿದಾಟ ಇವುಗಳೊಂದಿಗೆ ಸೂರ್ಯನ ಕಣ್ಣಾಮುಚ್ಚಾಲೇ ಆಟ ನೋಡುಗರನ್ನು ಬೆರಗು ಗೊಳಿಸುತ್ತಲೇ ಇರುತ್ತದೆ. ಅಂತಹ ಸೃಷ್ಟಿ ಸೌಂದರ್ಯದಿಂದ ತುಂಬಿದ ಯಾತ್ರಾ ಸ್ಥಳವದು. ಇಂತಹ ಸ್ಥಳವನ್ನು ನೋಡುತ್ತಲೇ ಪ್ರವಾಸಿಗರು ಮುಂದೆ ಸಾಗುತ್ತಿದ್ದರು. ನ್ಯಾಲದಿಂದ ಸಾಗಾಕ್ಕೆ ಪ್ರವಾಸಿಗರು ಪ್ರಯಾಣ ಬೆಳೆಸಿದರು. ದಾರಿಯುದ್ದಕ್ಕೂ ಎಲ್ಲಿ ನೋಡಿದಲ್ಲಿ ಬೋಳು ಬೆಟ್ಟಗಳು, ಒಣ ಪ್ರದೇಶ ವಿಸ್ತಾರವಾಗಿ ಹರಡಿಕೊಂಡಿತ್ತು. ಹಸಿರು ಮಾಯವಾಗಿತ್ತು. ಗಿಡಮರಗಳು ಮಾಯವಾಗಿದ್ದವು. ಆದರೆ ಎತ್ತರದ ಬೋಳು ಬೆಟ್ಟಗಳಿಗೆ ಕೊರತೆ ಇರಲಿಲ್ಲ. ಸ್ವಲ್ಪ ದೂರದ ತುದಿಯಲ್ಲಿ ಹಿಮರಾಶಿ ಹೊತ್ತು ನಿಂತ ಬೆಟ್ಟಗಳು ಕಾಣುತ್ತಿದ್ದವು. ಅವುಗಳಿಂದ ಹರಿದು ಬರುತ್ತಿದ್ದ ನೀರು, ಹಳ್ಳ ಹೊಳೆಯಾಗಿ ಅಲ್ಲಲ್ಲಿ ಕಂಡು ಬರುತ್ತಿದ್ದವು. ಇಂತಹ ಸುಂದರವಾದ ತಾಣಗಳನ್ನು ನೋಡುತ್ತಲೇ ತಮ್ಮ ಪ್ರಯಾಣವನ್ನು ಮುಂದುವರಿಸಿದರು.

ಮಾನಸದ ಮಡಿಲಲ್ಲಿ ತಬ್ಬಿಬ್ಬಾಗಿ ನಿಂತ ಪ್ರವಾಸಿಗರು ಅಲ್ಲಿನ ಮನಮೋಹಕವಾದ ಸುಂದರವಾದ ದೃಶ್ಯಗಳನ್ನು ಸವಿಯುತ್ತಿದ್ದಾರೆ. ಮಾನಸ ಸರೋವರ ವಿಷ್ಣುವಿನ ವಾಸಸ್ಥಾನವೆಂದು ಪ್ರತೀತ. ಅತ್ತ ಬ್ರಹ್ಮ ಮಧ್ಯ ವಿಷ್ಣು ಮತ್ತೊಂದು ಕಡೆ ಮಹೇಶ್ವರ, ಬ್ರಹ್ಮ, ವಿಷ್ಣು, ಮಹೇಶ್ವರ ಒಂದೇ ಪರಿಸರದಲ್ಲಿ ಒಂದೆಡೆಯಿಂದ ಸೃಷ್ಟಿಕರ್ತರನ್ನ ಎಲ್ಲರು ಭಾವಪರವಶರಾಗಿ ನಿಂತಿದ್ದನ್ನು ಈ ಕೃತಿಯಲ್ಲಿ ನೋಡಬಹುದು. ಮಾನಸ ಸರೋವರವು ಜಗತ್ತಿನ ಅತೀ ಎತ್ತರದ ನಿರ್ಮಲ ನೀರಿನ ಸರೋವರ. ಇದು ೪೫೫೬ ಮೀ ಎತ್ತರದಲ್ಲಿದೆ. ೮೮ ಕಿ.ಮೀ. ಸುತ್ತಳತೆಯ ಮಾನಸ ಸರೋವರದ ಆಳ ಸುಮಾರು ೩೦೦ ಅಡಿ. ಈ ಸರೋವರವು ಬೇಸಿಗೆಯಲ್ಲಿ ಕರಗುತ್ತದೆ. ಕರಗಿ ನೀರಾಗಿ ಅದು ಸತ್ಲೇಜ್, ಬ್ರಹ್ಮಪುತ್ರ, ಸಿಂದು, ಕರ್ನಾಲಿ ನದಿಗಳನ್ನು ಸೇರುತ್ತದೆ. ಇಂತಹ ಅನೇಕ ಮಹತ್ವಪೂರ್ಣ ಅಂಶಗಳನ್ನು ಲೇಖಕರು ಅಂಕಿ ಅಂಶಗಳ ಸಹಿತವಾಗಿ ಪರಿಪೂರ್ಣ ವಿವರಣೆಯನ್ನು ನೀಡಿದ್ದಾರೆ. ಒಟ್ಟಾರೆಯಾಗಿ "ಕೈಲಾಸ ಮಾನಸ" ಕೃತಿಯನ್ನು ಕೈಯಲ್ಲಿ ಹಿಡಿದು ಓದಲು ಪ್ರಾರಂಭಿಸಿದರೆ ನಾವು ಕೈಲಾಸ ಮಾನಸಕ್ಕೆ ಹೋದಷ್ಟೆ ಆನಂದವಾಗುತ್ತದೆ.[೧]

**೧.೫) ದೇಶಭಕ್ತ ರತ್ನಪ್ಪ ಕುಂಬಾರ :**

ಶ್ರೀ ಲಕ್ಷ್ಮಣ ಎನ್ ಬಳ್ಳೊಳ್ಳಿಯವರು ಬರೆದ "ದೇಶಭಕ್ತ ರತ್ನಪ್ಪ ಕುಂಬಾರ" ಅವರ ಕೃತಿಯನ್ನು ವಿಮೋಚನಾ ಸಂಘ ಅಥಣಿಯವರು ೧೭ ನೇ ಪ್ರಕಟಣೆಯಾಗಿ ಹೊರತಂದಿದ್ದಾರೆ.

ಆಧುನಿಕ ಭಾರತ ನಿರ್ಮಾಣದ ಶಿಲ್ಪಿಗಳಲ್ಲೊಬ್ಬರಾದ ಶ್ರೀ ರತ್ನಪ್ಪ ಕಂಬಾರರು ಬಹುಮುಖ ವ್ಯಕ್ತಿತ್ವವನ್ನು ಕುರಿತು ಸುಂದರವಾಗಿ ಚಿತ್ರಿಸಿದ್ದಾರೆ. ಮಹಾರಾಷ್ಟ್ರದಲ್ಲಿ ಅವರದು ಎದ್ದು ಕಾಣುವ

೧. "ಕೈಲಾಸ ಮಾನಸ" ಲೇಖಕರು ವೆಂಕಟೇಶ ಮಾಚಕನೂರ ೨೦೧೦ ರಲ್ಲಿ ವಿಮೋಚನಾ ಸಂಘ ಅಥಣಿ.

ನಾಮ. ಇಂದಿನ ದಿನಮಾನದಲ್ಲಿ ಶ್ರೀ ಕಂಬಾರರಂಥವರು ಸಿಗುವುದು ಬಹಳ ವಿರಳ. ಹೆಸರಿನಂತೆ ಅವರು ಅಮೂಲ್ಯ ರತ್ನವೇ ಸರಿ. ಕೇವಲ ಸಾಮಾನ್ಯ ಬಡಕುಟುಂಬದಿಂದ ಮೇಲೆರಿದ ಮಹಾಮುತ್ಸದ್ದಿ. ಅವರದು ಪರಿಶುದ್ಧ ಬದುಕು ಶರಣ ಸಂಸ್ಕೃತಿಯ ಜೀವನವನ್ನು ಸಾಗಿಸುತ್ತಿದ್ದರು. ನಡೆ-ನುಡಿಗಳಲ್ಲಿ ಬೇಧವಿಲ್ಲದ ಜೀವನವನ್ನು ನಡೆಸುತ್ತಿದ್ದರು. ಅಂತವರನ್ನು ಕುರಿತು ಶ್ರೀ ಲಕ್ಷ್ಮಣ ಬಳ್ಳೊಳ್ಳಿಯವರು ತುಂಬಾ ಮೌಲ್ಯಯುತವಾಗಿ ನಿರೂಪಿಸಿದ್ದಾರೆ.

ಕರ್ನಾಟಕ ಮತ್ತು ಮಹಾರಾಷ್ಟ್ರ ಪ್ರಾಂತ್ಯದಲ್ಲಿ ಪ್ರಸಿದ್ಧಿ ಪಡೆದಿರುವ ರತ್ನಪ್ಪನವರು ತಮ್ಮ ಮನಸ್ಸಿನ ಪ್ರಸನ್ನತೆಯನ್ನು ಸದಾಕಾಯ್ದುಕೊಂಡಿದ್ದಾರೆ. ಸಮಾಜ ಕಾರ್ಯದಲ್ಲಿ ಅರವತ್ತು ವರ್ಷಗಳಿಂದಲೂ ಅವರ ಜೀವನವನ್ನು ಕುರಿತು ಕಸ್ತೂರಿಯ ಪರಿಮಳದಂತೆ ಲೇಖಕರು ಈ ಕೃತಿಯಲ್ಲಿ ವಿವರಿಸಿದ್ದಾರೆ. ಕಿರಿಯರಿಗೂ ಅರ್ಥವಾಗುವ ರೀತಿಯಲ್ಲಿ ರಾಷ್ಟ್ರಪ್ರೇಮಿ ರತ್ನಪ್ಪ ಕುಂಬಾರವರ ಜೀವನವೇ ಒಂದು ಕ್ರಾಂತಿಕಾರಕ ಘಟನೆಯನ್ನು ಕುರಿತು ಹೇಳಿದ್ದಾರೆ.

**ಅಮೂಲ್ಯ ರತ್ನ:**

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಷರಿಗೆ ಸಿಂಹವೆನಿಸಿದ ಹೋರಾಟಗಾರರಲ್ಲಿ ದೇಶಭಕ್ತ ಕುಂಬಾರರು ಪ್ರಮುಖರು. ಅವರು ತಳೆದಿದ್ದ ಗಂಭೀರ ನಿಲುವು ಬ್ರಿಟಿಷರಿಗೆ ತಲೆನೋವಾಗಿ ಪರಿಣಮಿಸಿತು. ಭಾರತದ ವಿಭಜನೆಗೆ ವಿರೋಧ ವ್ಯಕ್ತಪಡಿಸಿದ ಅಖಂಡ ರಾಷ್ಟ್ರೀಯವಾದಿ ಪಾಕಿಸ್ತಾನದ ಎದುರು ನಿಂತು ಹೋರಾಟ ಮಾಡಿದ ದಿಮಂತ ವ್ಯಕ್ತಿ ಭಾರತದ ವೀರ ಪುರುಷ ಬೇರೆ ಸಂಸ್ಥಾನಗಳನ್ನು ಭಾರತದ ಜೊತೆಗೆ ವಿಲಿನಗೊಳಿಸಲು ಹೋರಾಟ ಮಾಡಿದ ಪ್ರಮುಖ ವ್ಯಕ್ತಿ ಕುಂಬಾರರು. ಇವರು ಸಂವಿಧಾನ ಸಭೆಯ ಸದಸ್ಯರಾಗಿಯೂ ಸೇವೆಯನ್ನು ಸಲ್ಲಿಸಿದ್ದಾರೆ. ಶ್ರೀ ರತ್ನಪ್ಪ ಕುಂಬಾರರು ದೇಶ ಸೇವೆಗಾಗಿ ತಮ್ಮನ್ನು ತಾವು ತೊಡಗಿಸಿಕೊಂಡು ಇಡೀ ದೇಶವೇ ಬೇರಗಾಗುವಂತೆ ಮಾಡಿದರು ಆದ್ದರಿಂದ ಇವರನ್ನು ಕೃತಿಕಾರರು ಅಮೂಲ್ಯ ರತ್ನ ಎಂದು ಕರೆದುದರಲ್ಲಿ ಯಾವುದೇ ಸಂದೇಹವಿಲ್ಲ. ಅಂತಹ ಮೇದಾವಿ ಪುರುಷ ರತ್ನದಂತೆಯೇ ಪ್ರಕಾಶಮಾನವಾಗಿ ಶೋಭಿಸುತ್ತಿದ್ದ ಎಂಬುದನ್ನು ಬಹಳ ಮೌಲ್ಯಯುತವಾದ ಪದಗಳನ್ನು ಬಳಸಿ ಮಾರ್ಮಿಕವಾಗಿ ವಿವರಿಸಿದ್ದಾರೆ.

**ಕಾರಾಗೃಹ :**

ರತ್ನಪ್ಪ ಕುಂಬಾರರು ಕಾನೂನು ಪದವಿಯನ್ನು ಪಡೆದ ನಂತರ ಪಾರ್ವತಿ ದೇವಿಯ ಕೈಹಿಡಿದು, ಸಪ್ತಪದಿ ತುಳಿದರು. ಆದರೂ ಸಹ ಅವರಿಗೆ ಸ್ವಾತಂತ್ರ್ಯದ ಕಾವು ಕಣ್ಣಿಗೆ ಕಟ್ಟುವಂತೆ ನಾಟುತಿತ್ತು. ಅಲ್ಲಿಂದ ಅವರು ಕೆಂಪು ಮೋತಿಯ ಬ್ರಿಟಿಷರ ವಿರುದ್ಧ ಹೋರಾಡಲು ತೀರ್ಮಾನಿಸಿದರು. ಆ ಜಿಲ್ಲೆಯಲ್ಲಿರುವ ಪ್ರಜಾಪರಿಷತ್ತಿನ ಪ್ರಧಾನ ಕಾರ್ಯದರ್ಶಿಯಾಗಿ, ಅದರ ಮುಖಂಡತ್ವನ್ನು ವಹಿಸಿ ಮತ್ತೆ ಬ್ರಿಟಿಷರಿಗೆ ತಲೆನೋವಾಗಿ ಪರಿಣಮಿಸಿದರು. ಆದರೆ ಶ್ರೀಯುತರು ತಮ್ಮ ಸಂಘಟನೆಯನ್ನು

ಮುಂದುವರಿಸಿದರು. ಇವರ ಸಂಘಟನೆಯ ಶಕ್ತಿಯನ್ನು ನೋಡಿ ಅವರನ್ನು ಬ್ರಿಟಿಷ ಸರಕಾರ ಬಂಧಿಸಿದರು ಎಂಬುದನ್ನು ಶ್ರೀ ಲಕ್ಷ್ಮಣ ಬಳ್ಳೊಳ್ಳಿಯವರು ತುಂಬ ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ.

**ವೀರ ಸಂಕಲ್ಪ :**

ಕುಂಬಾರರನ್ನು ಬಂಧಿಸಿದ ಸುದ್ದಿಯು ಇಡೀ ದೇಶದ ತುಂಬೆಲ್ಲ ಹಬ್ಬಿತು. ಅವರ ಬಂಧನದಿಂದ ದೇಶದ ತುಂಬೆಲ್ಲಾ ಜನ ರೊಚ್ಚಿಗೆದ್ದು, ಕೆಂಪು ಮೂತಿಯ ಬ್ರಿಟಿಷರ ವಿರುದ್ಧ ಘೋಷಣೆಗಳನ್ನು ಕೂಗಲಾರಂಭಿಸಿದರು. ಅದರ ಪರಿಣಾಮವಾಗಿ ಶ್ರೀಯುತರನ್ನು ಬ್ರಿಟಿಷ ಸರಕಾರ ಬಿಡುಗಡೆ ಮಾಡಿದರು. ಬಿಡುಗಡೆಗೊಂಡ ಕುಂಬಾರರು ನೇರ ತನ್ನ ತಾಯಿ ಮಡದಿಯನ್ನು ನೋಡಲು ಹೋಗದೆ ನೇರವಾಗಿ ಬ್ರಿಟಿಷ ದೌರ್ಜನ್ಯದಿಂದ ನೊಂದಿರುವ ವ್ಯಕ್ತಿಗಳನ್ನು ನೋಡಲು ಹೋದರು ಎಂಬುದನ್ನು, ಲೇಖಕರು ಕುಂಬಾರರಿಗೆ ಎಷ್ಟೊಂದು ದೇಶಪ್ರೇಮವಿತ್ತು ಎಂಬುದನ್ನು ಓದುಗರಿಗೆ ತಿಳಿಯಪಡಿಸಿದ್ದಾರೆ.

**ಭೂಗತ :**

ಕುಂಬಾರರ ಕಾರ್ಯಗಳು ಸತತವಾಗಿ ಮುಂದುವರಿದವು. ಅವೆಲ್ಲವೂ ಬ್ರಿಟಿಷರ ವಿರುದ್ಧವೇ ನಡೆದಿವೆ ಎಂಬುದನ್ನು ಸರಕಾರ ತಿಳಿದಿತ್ತು. ಈ ಕಾರಣದಿಂದ ಮತ್ತೆ ಅವರನ್ನು ಬಂಧಿಸಬೇಕು ಎಂದು ಕೆಂಪು ಪಿರಂಗಿಗಳು ಆದೇಶ ನೀಡಿದರು. ಆದರೆ ಶ್ರೀಯುತರಿಗೆ ಜನರ ಬೆಂಬಲ ಸಾಗರದಂತ್ತಿದ್ದರಿಂದ ಅಧಿಕಾರಿಗಳಿಗೆ ಬಂಧಿಸಲು ಸಾದ್ಯವಾಗಲಿಲ್ಲ. ಮಾಸಗಳು ಕಳೆದರು ಸಹ ಅವರನ್ನು ಬಂದಿಸಲಿಲ್ಲ. ಹೀಗಾಗಿ ಸರಕಾರ ಎಲ್ಲ ಅಧಿಕಾರಿಗಳನ್ನು ಸಾಮೂಹಿಕವಾಗಿ ವರ್ಗ (ವರ್ಗಾವಣೆ) ಮಾಡಿದರು. ನಂತರ ಅಲ್ಲಿಗೆ ಚಾಣಾಕ್ಷ ಅಧಿಕಾರಿಯನ್ನು ನಿಯೋಜಿಸಿದರು ಸಹ ಅವರಿಗೂ ಸಹ ಯಾಮಾರಿಸಿ ಬೆಟ್ಟದ ಗುಹೆಯಲ್ಲಿ ಅವಿತುಕೊಂಡು ಜನರಿಗೆ ತರಬೇತಿಯನ್ನು ನೀಡುತ್ತಿದ್ದನ್ನು ಲೇಖಕರು ಕುಂಬಾರರ ಜೀವನ ಯಾತ್ರಿಯನ್ನು ತುಂಬಾ ಮೌಲ್ಯಯುತವಾಗಿ ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಆದ್ದರಿಂದ ಇದೊಂದು ಮಹತ್ವಪೂರ್ಣ ಆವೃತ್ತಿಯಾಗಿದೆ.[೧]

೧. "ದೇಶಭಕ್ತ ರತ್ನಪ್ಪ ಕುಂಬಾರ" ಲೇಖಕರು ಲಕ್ಷ್ಮಣ ಎನ್. ಬಳ್ಳೋಳ್ಳಿ ೧೯೯೪ ರಲ್ಲಿ ವಿಮೋಚನಾ ಸಂಘ ಅಥಣಿ.

## ೨) ಸೃಜನೇತರ ಸಾಹಿತ್ಯ

| | | | |
|---|---|---|---|
| ೨.೧) | ಯುಗ ಪ್ರವರ್ತಕ | – | ವಿಮರ್ಶೆ |
| ೨.೨) | ಹರಕೆಯ ಹೆಣ್ಣು | – | ಸಂಶೋಧನಾ ಪ್ರಬಂಧ |
| ೨.೩) | ಧರ್ಮ ಮತ್ತು ರಾಜಕೀಯ | – | ಸಂಶೋಧನಾ ಪ್ರಬಂಧ |
| ೨.೪) | ಸವದತ್ತಿ ಯಲ್ಲಮ್ಮ ಹಾಗೂ ದೇವದಾಸಿ ಪದ್ಧತಿ | – | ಸಂಶೋಧನಾ ಪ್ರಬಂಧ |
| ೨.೫) | ಉತ್ತರ ಕರ್ನಾಟಕದ ಜಾನಪದ ಮೇಳಗಳು | – | ಸಂಶೋಧನಾ ಪ್ರಬಂಧ |
| ೨.೬) | ದು. ನಿಂ. ಬೆಳಗಲಿ ಬದುಕು-ಬರಹ | – | ಸಂಶೋಧನಾ ಪ್ರಬಂಧ |
| ೨.೭) | ಬಸವಪ್ರಭು | – | ಅಭಿನಂಧನ |
| ೨.೮) | ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು | – | ಅನುವಾದ |
| ೨.೯) | ಸಂಚಾರಿ | – | ಅನುವಾದ |

### ೨.೧) ಯುಗ ಪ್ರವರ್ತಕ :

**ಪ್ರವೇಶ :**

ಬಸವಣ್ಣವರು ಹೇಳಿದ "ದಯವೇ ಧರ್ಮದ ಮೂಲವಯ್ಯ" ಎಂಬ ಮಾತನ್ನು ಇಡೀ ನಾಡಿನ ಜನವೇ ಒಪ್ಪಿಕೊಂಡಿತು. ಎಕೆಂದರೆ ಈ ಒಂದು ಮಾತಿನಲ್ಲಿ ಮಾನವ ಕುಲದ ಅಗಮ್ಯ ಶಕ್ತಿ ಅಡಗಿದೆ ಎಂಬುದನ್ನು ಲೇಖಕರು ಈ ಕಿರು ಹೊತ್ತಿಗೆಯಲ್ಲಿ ವಿವರಿಸಿದ್ದಾರೆ.

**ವಸ್ತುಸ್ಥಿತಿ :**

ಜೀವನ ದರ್ಶನದಲ್ಲಿ ಲೇಖಕರು ಬಹಳ ಉತ್ಸುಕತೆಯಿಂದ ಬಸವಣ್ಣನವರ ಜೀವನ ನಿದರ್ಶನಗಳನ್ನು ದಾರೆ ಎರೆದಿದ್ದಾರೆ. ೧೨ ನೇ ಶತಮಾನದಲ್ಲಿ ಇಡಿ ನಾಡಿನ ಜನರ ಮನಸ್ಸಿನಲ್ಲಿ ಕ್ರಾಂತಿಯನ್ನೆ ಎಬ್ಬಿಸಿದ ಬಸವಣ್ಣನವರು ಒಂದು ನಾಡಿನ ಸಂಪ್ರದಾಯ ಅರಿಯಬೇಕಾದರೆ ಅಲ್ಲಿ ಮುಖ್ಯವಾಗಿ ಆಧ್ಯಾತ್ಮದಲ್ಲಿ ಯಾವುದೇ ರೀತಿಯ ಕುಲಗೋತ್ರಗಳಿಗೆ ಪ್ರಾಮುಖ್ಯತೆಯನ್ನು ನೀಡದವರಲ್ಲಿ ಬಸವಣ್ಣನವರು.

"ಇವನಾರವ, ಇವನಾರವ, ಇವನಾರವ, ಎಂದೆನಿಸದಿರಯ್ಯ
ಇವ ನಮ್ಮವ, ಇವ ನಮ್ಮವ ಎಂದೆನಿಸಯ್ಯ
ಇವ ನಮ್ಮ ಮನೆಯ ಮಗನೆಂದೆನಿಸಯ್ಯ"

ಅಂದರೆ ಬಸವಣ್ಣವರು ಯಾವುದೇ ರೀತಿಯ ಜಾತಿ ಧರ್ಮಗಳಿಗೆ ಅಂಟಿಕೊಳ್ಳದೇ ಕೇವಲ ಆಧ್ಯಾತ್ಮದ ದೃಷ್ಟಿಯಿಟ್ಟುಕೊಂಡು ಜನರ ಮನಸ್ಸಿನಲ್ಲಿ ಸಮತಾಭಾವವನ್ನು ತುಂಬಿದವರು ಯುಗಪ್ರವರ್ತಕ ಬಸವಣ್ಣನವರು ಎಂಬುದನ್ನು ಲೇಖಕರು ವಿವರಣೆ ನೀಡಿದ್ದಾರೆ.

"ದಯವೇ ಧರ್ಮದ ಮೂಲವಯ್ಯ" ಎಲ್ಲ ಧರ್ಮಗಳ ಮಧ್ಯದಲ್ಲಿಯೂ ದಯದ ವಾತಾವರಣ ಅತೀ ಅವಶ್ಯಕ ಪ್ರತಿಯೊಂದು ಜೀವರಾಶಿಗಳಲ್ಲಿಯೂ ದಯೆ ಇರಬೇಕು ಅದರಲ್ಲಿರುವ ಪ್ರಮುಖವಾದ ಅಂಶಗಳನ್ನು ತಿಳಿಯಬೇಕು. ಇದರಿಂದ ಮಾನವ ಜನಾಂಗವು ಒಳ್ಳೆಯ ಇತಿಹಾಸ ಸೃಷ್ಠಿ ಮಾಡಲು ಸಾದ್ಯವಾಗುತ್ತದೆ ಎಂಬುದನ್ನು ಲೇಖಕರು ಅಭಿಪ್ರಾಯ ಪಡುತ್ತಾರೆ. ಬಸವಣ್ಣನವರ ಜೀವನ ದರ್ಶನವನ್ನು ಅರ್ಥಮಾಡಿಕೊಳ್ಳುವುದು ಹಾಗೂ ಅದನ್ನು ನಮ್ಮ ಜೀವನದಲ್ಲಿ ಪ್ರತಿಯೊಬ್ಬರು ಅಳವಡಿಸಿಕೊಳ್ಳುವುದು ಅವಶ್ಯಕವಾಗಿದೆ ಎಂಬುದನ್ನು ಮನತುಂಬಿ ವಿವರಿಸಿದ್ದಾರೆ.

ವೀರಶೈವವಾದ ಈ ವಾದದಲ್ಲಿ ಲೇಖಕರು ಯಾರಿಗೆ ವೀರಶೈವರೆನ್ನಬೇಕು, ಯಾರಿಗೆ ಅನ್ನಬಾರದು ಎಂಬುದರ ಬಗ್ಗೆ ಅರ್ಥವತ್ತಾಗಿ ವಿವರಣೆಯನ್ನು ಜನರಿಗೆ ನೀಡಿದ್ದಾರೆ. "ವೀರತನದಿಂದ ಜೀವನವನ್ನು ಜೀವಿಸುವವರು ವೀರಶೈವನು" ಈ ಮಾತು ಸ್ಪಟಿಕದಂತೆ ಸ್ಪಷ್ಟವಾಗಿದೆ. ಯಾಕೆಂದರೆ ಯಾವ ವ್ಯಕ್ತಿಯು ವೀರತನದಿಂದ ಶೂರತನದಿಂದ ತನ್ನ ಜೀವನವನ್ನು ಸಾಗಿಸುತ್ತಾನೋ ಅವರೆಲ್ಲರೂ ವೀರಶೈವರೆಂಬುದು ಅವರ ವಾದ ಜಾತಿಯಿಂದಲ್ಲ ಯಾವ ಮತದಿಂದಲ್ಲ. ಈ ಸಮಾಜದಲ್ಲಿ ಮೇಲು-ಕೀಳುವೆಂಬ ಭಾವವನ್ನು ತಾಳದೇ ಎಲ್ಲರು ಸಮಾನರು ಎಂಬುದನ್ನು ಎತ್ತಿ ತೋರಿಸಿದ್ದಾರೆ. ಅಲ್ಲದೇ ಈ ಸಮಾಜದಲ್ಲಿ ಜಾತಿಗಳು ಎರಡೇ ಒಂದು ಹೆಣ್ಣು, ಒಂದು ಗಂಡು. ಅದಕ್ಕೆ ಮಹಾತ್ಮರು ಹೀಗೆ ಹೇಳುತ್ತಾರೆ. "ಶರಣಸತಿ ಲಿಂಗಪತಿ" ಎಂಬ ಸೂತ್ರ ವಾಕ್ಯವೇ ಸಾಕು ಇಂದಿನ ಸಮಾಜದಲ್ಲಿ ಜೀವನವನ್ನು ಸಾಗಿಸಲು.

ಅಂದು ಬಸವಣ್ಣನವರು ವೀರಶೈವ ವಾದವನ್ನು ಬೆಂಬಲಿಸಿದ್ದರು. ಯಾಕೆಂದರೆ ಅಂದಿನ ಪರಿಸ್ಥಿತಿಗೆ ತಕ್ಕಂತೆ ಬದಲಾಗಬೇಕಾಗಿರುವ ಮಾನವನ ಸಹಜ ಧರ್ಮ. ಅಂದು ಬಸವಣ್ಣನವರು ತಮ್ಮ ಕ್ರಾಂತಿ ಕಾರ್ಯದಲ್ಲಿ ಅಂದಿನ ಭೌದ್ಧಿಕ ಸಾಮಗ್ರಿಯನ್ನು ಉಪಯೋಗಿಸಿದ್ದಾರೆಂಬುದನ್ನು ಲೇಖಕರು ಮಾರ್ಮಿಕವಾಗಿ ಮೂಡಿಸಿದ್ದಾರೆ.

ಸಾಮಾಜಿಕ ವ್ಯವಸ್ಥೆಯಲ್ಲಿ ತೀವ್ರತರಹದ ಬದಲಾವಣೆಯನ್ನು ಮಾಡಬೇಕಾದ ಸಂದರ್ಭದಲ್ಲಿ ಬಸವಣ್ಣನವರು ಅಂದು ಸಾಮಾಜಿಕವಾಗಿ ವಿರೋದವನ್ನು ಎದುರಿಸುವ ಪರಿಸ್ಥಿತಿಯು ಬಂದೊದಗಿತ್ತು ಎಂಬುದು ಸಮಾಜ ದರ್ಶನದಲ್ಲಿ ನಾವು ಕಾಣಬಹುದು. ಆಗ ಮಹಾಪ್ರವರ್ತಕ ಒಂದು ಮಾತನ್ನು ಹೇಳುತ್ತಾರೆ. ಅದೇನೆಂದರೆ "ಸೋಹಂ ಬೇಡ ದಾಸೋಹಂ" ಇರಲಿ ಎಂದರು.

ಸಮಾಜದ ಗತಿಯಲ್ಲಿ "ಜೀವನ ಕಲಹದಲ್ಲಿ ಬಲವಿದ್ದ ಪ್ರಾಣಿ ಬದಕುತ್ತದೆ. ಬಲವಿಲ್ಲದ್ದು ಸಾಯುತ್ತದೆ." ಎಂಬ ಲೇಖಕರ ಈ ಮಾತು ಸೋಗಸಾಗಿದೆ. ಯಾವ ವ್ಯಕ್ತಿಯು ಬಲಿಷ್ಠನಾಗಿರುತ್ತಾನೋ

ಅವನು ಬದುಕುತ್ತಾನೆ. ಇಲ್ಲವಾದರೆ ತನ್ನ ಸಾವನ್ನ ತಾನೆ ತಂದುಕೊಳ್ಳುತ್ತಾನೆ ಎಂಬುದು ನಾವು ಅರಿಯಬೇಕು.

ಒಂದು ಒಳ್ಳೆಯ ಸಮಾಜ ನಿರ್ಮಾಣವಾಗಬೇಕಾದರೆ ಬಸವಣ್ಣನವರಂತಹ ಒಳ್ಳೆಯ ಪ್ರವರ್ತಕರಿರಬೇಕೆಂಬುದು ಶತಸಿದ್ದ ಯಾಕೆಂದರೆ ಬಸವಣ್ಣನವರು ಸಮಾಜದಲ್ಲಿನ ಜನರ ಜೀವನ ಇರುವಿಕೆಯನ್ನು ಗಮನಿಸಿ ಎಷ್ಟೊಂದು ಮೌಢ್ಯ ಜೀವನ ಸಾಗಿಸುತ್ತಾರೆಂಬುದಕ್ಕೆ ಒಂದು ಮಾತನ್ನು ವಚನದ ಮೂಲಕ ಎಷ್ಟೊಂದು ಸೊಗಸಾಗಿ ಹೇಳುತ್ತಾರೆ.

"ಕಲ್ಲಿನ ನಾಗರ ಹಾವನ್ನು ಪೂಜಿಸುವವರು
ಜೀವಂತ ನಾಗರ ಹಾವನ್ನು ಕಂಡರೆ
ಕೊಲ್ಲಲು ಮುಂದಾಗುವುದೇಕೇ?"

ಎಂಬ ಪ್ರಶ್ನೆಯನ್ನು ಎಸೆಯುತ್ತಾರೆ. ಕಿಚ್ಚ ದೈವವೆಂದು ಸವಿಯನಿಕ್ಕುವ ಹಾರುವರ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ, ಬಚ್ಚಲ ನೀರು ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟು ಎಲ್ಲರ ಕರೆವರಯ್ಯ ಕೂಡಲಸಂಗಮದೇವ ವಂದನೆಯ ಮರೆದು ನಿಂದಿಸುತಲಪ್ಪರಯ್ಯ ನೇರವಾಗಿ ಹೃದಯಕ್ಕೆ ಮುಟ್ಟುವ ಮಾತು ಅನುಭವಕ್ಕೆ ಬರುವ ವಿಚಾರ ಬುದ್ದಿಗೂ ನಿಲುಕುವ ಅರ್ಥ ಎಂಬುದು ಲೇಖಕರ ಅಭಿಪ್ರಾಯವಾಗಿದೆ.

ಬಸವಣ್ಣನವರ ಅನೇಕ ಸಮಾಜದ ಸುಧಾರಣಾ ಕಾರ್ಯದಲ್ಲಿ ತೊಡಗಿಸಿಕೊಂಡು ಮನುಷ್ಯನು ಸಮಾಜದಲ್ಲಿ ತನ್ನನ್ನು ತಾನು ಮೊದಲು ಅರಿಯಬೇಕು. ಅಂದಾಗ ಮಾತ್ರ ಸಮಾಜ ಸುಧಾರಣೆಯಾಗುತ್ತದೆ. ಇಲ್ಲದೇ ಹೋದರೆ ಅದು ದೀಪದ ಹಿಂದಿನ ಕತ್ತಲಿನಂತಾಗುತ್ತದೆ ಎಂಬುದನ್ನು ನಾವು ಅರಿಯಬೇಕು.

ಲೇಖಕರು ಬಸವಣ್ಣನವರ ಆದರ್ಶದ ದರ್ಶಣವನ್ನು ಮೂಡಿಸಲು ಹಿಂಜರಿಯುವದಿಲ್ಲ. ಅವರಲ್ಲಿರುವ ಆದರ್ಶವನ್ನು ಮನಮುಟ್ಟುವಂತೆ ವಿವರಿಸಿದ್ದಾರೆ. ಒಟ್ಟಾರೆಯಾಗಿ ಯುಗಪ್ರವರ್ತಕ ಈ ಕಿರು ಹೊತ್ತಿಗೆಯಲ್ಲಿ ಸಂಪೂರ್ಣವಾಗಿ ಬಸವಣ್ಣನವರ ಜೀವನವನ್ನು ಜನರ ಮನಸ್ಸಿಗೆ ಮುಟ್ಟುವಂತೆ ಮಾಡಲು ಲೇಖಕರು ಶ್ರಮವಹಿಸಿದ್ದಾರೆಂದು ಹೇಳಬಹುದು.[೧]

### ೨.೨) ಹರಕೆಯ ಹೆಣ್ಣು :

ಅನೇಕ ಸಾಮಾಜಿಕ ಸಮಸ್ಯೆಗಳಲ್ಲಿ ವೇಶ್ಯಾವೃತ್ತಿಯೂ ಒಂದು. ಇದನ್ನು ಸಮಾಜದ ಮುಖದಲ್ಲಿ ಇದಕ್ಕೆ ದೇವದಾಸಿ ಪದ್ಧತಿ ಎಂದು ಕರೆಯಲಾಗುತ್ತಿತ್ತು. ದೇವ–ದಾಸಿ ಎಂದು ಈ ಪದಗಳನ್ನು

೧. 'ಯುಗಪ್ರವರ್ತಕ' ಲೇಖಕರು ಹಳೇಪೇಟೆ ಚಿಂತಾಮಣಿ ೧೯೮೯ ರಲ್ಲಿ ವಿಮೋಚನಾ ಸಂಘ ಅಥಣಿ.

ಬಿಡಿಸಿ ಅರ್ಥೈಸಿದಾಗ ಅದರ ಮಹತ್ವ ಏನೆಂದು ನಮಗೆ ಅರ್ಥವಾಗುತ್ತದೆ. ದೇವದಾಸಿ ಎಂದರೆ ದೇವರಿಗೆ ತನ್ನನ್ನು ತಾನು ಅರ್ಪಿಸಿಕೊಂಡು ದಾಸಿಯಂತೆ ಸೇವಕನಂತೆ ಕೆಲಸ ಮಾಡುವುದು. ಆದರೆ ಈ ಹೆಸರನ್ನು ಎಷ್ಟೋ ಜನರು ದುರುಪಯೋಗಪಡಿಸಿಕೊಂಡು ತಮ್ಮ ದೇಹವನ್ನು ಮಾರಿಕೊಳ್ಳುವ ಮೌಢ್ಯತೆಯನ್ನು ಸಮಾಜದಲ್ಲಿ ಬೆಳೆಸುತ್ತಾರೆಂಬುದನ್ನು ಡಾ. ಕೆ. ಜಿ. ಗುರುಮೂರ್ತಿಯವರು ಈ ಸಮಾಜದಲ್ಲಿನ ಮೌಢ್ಯತೆಯನ್ನು ಹೊಡೆದು ಹಾಕಲು ಹಾಗೂ ದೇವದಾಸಿಯೆಂದು ಹೇಳಿ ವೇಶ್ಯಾವೃತ್ತಿಯಲ್ಲಿ ತೊಡಗಿದವರಿಗೆ ಜ್ಞಾನ ಬೆಳಕನ್ನು ನೀಡುವುದರಲ್ಲಿ ಈ "ಹರಕೆಯ ಹೆಣ್ಣು" ಎಂಬ ಕಿರುಹೊತ್ತಿಗೆಯ ಮೂಲಕ ಪ್ರಯತ್ನ ಪಟ್ಟಿದ್ದಾರೆಂಬುದು ಸಂತೋಷದ ಸಂಗತಿಯಾಗಿದೆ.

ಪ್ರಸ್ತಾವನೆಯಲ್ಲಿ ಲೇಖಕರು ಭಾರತವು ಒಂದು ವಿಶಾಲವಾದ ಹಾಗೂ ಅನೇಕ ಸಂಪ್ರದಾಯಗಳನ್ನು ಹೊಂದಿದ ಸುಂದರವಾದ, ಪಾವಿತ್ರತೆಯಿಂದ ಕೂಡಿದ ದೇಶ. ಇಲ್ಲಿ ಪ್ರತಿಯೊಬ್ಬರಿಗೂ ತಮ್ಮದೇ ಭಾಷೆ, ಸಂಪ್ರದಾಯ, ಸಂಸ್ಕೃತಿಯನ್ನು ಹೊಂದಿದ್ದಾರೆ. ಆದರೂ ಸಹ ಜನ ಮೂಢನಂಬಿಕೆ ಒಳಗಾಗುತ್ತಿದ್ದಾರೆಂದು ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಹಿಂದೆ ರಾಜ ಮಹಾರಾಜರ ಕಾಲದಿಂದಲೂ ಈ ವೃತ್ತಿಯು ನಡೆದುಕೊಂಡು ಬಂದಿದೆ. ಅದನ್ನು ಸಮಾಜದಲ್ಲಿರುವ ಎಲ್ಲ ಸುಶೀಕ್ಷಿತ ವ್ಯಕ್ತಿಗಳು ಸೇರಿ ಈ ವೃತ್ತಿಗೆ ನಾಂದಿ ಹಾಡಿದರೆ ಮಾತ್ರ ಸಾದ್ಯ ಎಂಬುದು ಅವರ ಅಭಿಪ್ರಾಯವಾಗಿದೆ.

ದೇವದಾಸಿ ಪದ್ಧತಿಗೆ ಚಾರಿತ್ರಿಕವಾದ ಹಿನ್ನೆಲೆಯನ್ನು ಲೇಖಕರು ಆಧಾರ ಸಹಿತವಾಗಿ ವಿವರಣೆಯನ್ನು ನೀಡಿದ್ದಾರೆ. ಎಲ್ಲಾ ಧರ್ಮಗಳಲ್ಲಿ ಒಂದಲ್ಲ ಒಂದು ವಿಧದಲ್ಲಿ ಇಂತಹ ಪದ್ಧತಿಗಳು ಜಾರಿಯಲ್ಲಿರುವುದು ಕಂಡುಬರುತ್ತದೆ. ಶಾಸನಗಳ ಆಧಾರದ ಮೇಲೆ ಹಿಂದೆ ತಮಜಾವೂರು, ಮಧುರೆ, ಬೇಲೂರ, ಸೋಮನಾಥಪೂರ ಮುಂತಾದ ಪ್ರದೇಶಗಳಲ್ಲಿ ದೇವದಾಸಿಯರು ಇದ್ದರು ಎಂಬುದನ್ನು ಶಾಸನಗಳ ಉಲ್ಲೇಖದ ಪ್ರಕಾರ ನಾವು ಕಂಡುಕೊಳ್ಳಬಹುದು. ಆದರೆ ಹಿಂದಿನ ಕಾಲದಲ್ಲಿ ಇದ್ದ ದೇವದಾಸಿ ಪದ್ಧತಿಯೇ ಬೇರೆಯಾಗಿತ್ತು. ಆದರೆ ಇಂದಿನ ದಿನಮಾನಗಳಲ್ಲಿ ಈ ಪದ್ಧತಿಯು ಬೇರೆಯೇ ದಾರಿಯನ್ನು ಹಿಡಿದಿದೆ ಎಂಬುದು ವಿಷಾದದ ಸಂಗತಿಯಾಗಿದೆ. ಹಿಂದಿನ ಕಾಲದಲ್ಲಿ ಕೇವಲ ದೇವರ ಕೆಲಸ ಕಾರ್ಯಗಳಲ್ಲಿ ಮಾತ್ರ ತೋಡಗುತ್ತಿದ್ದರು. ಆದರೆ ಈ ಹೊತ್ತು ಆ ಪದಗಳನ್ನು ದುರುಪಯೋಗಪಡಿಸಿಕೊಂಡು ವೇಶ್ಯಾವೃತ್ತಿಗಳಲ್ಲಿ ತೊಡಗಿರುವುದು ಕಂಡುಬರುತ್ತದೆ. ಆದ್ದರಿಂದ ಈ ಕಿರುಹೊತ್ತಿಗೆಯಲ್ಲಿ ಲೇಖಕರ ಆಸೆಯೆ ಏನೆಂದರೆ ಇಂತಹ ಕೆಟ್ಟ ಸಂಪ್ರದಾಯ ಒಳಗೊಂಡಿರುವ ಸಮಾಜವನ್ನು ಸರಿಪಡಿಸಬೇಕಾದರೆ ಪ್ರಜ್ಞಾವಂತ ಜನರು ಮುಂದೆ ಬರಬೇಕು ಅದರ ಜೊತೆ ಜೊತೆ ಯಾವ ಯಾವ ದೇವಸ್ಥಾನಗಳಲ್ಲಿ ದೇವದಾಸಿ ಪದ್ಧತಿಯು ಜಾರಿಯಲ್ಲಿದೆ ಅಂತಹ ಸ್ಥಳಗಳನ್ನು ಪ್ರವಾಸಿ ತಾನಗಳನ್ನಾಗಿ ಮಾಡಬೇಕು, ಅಂದಾಗ ಅಲ್ಲಿ ಪ್ರತಿನಿತ್ಯ ಸುಶಿಕ್ಷಿತ ಜನ ಬಂದು ಹೋಗುವದರಿಂದ ಈ ಪದ್ಧತಿಯು ಕಡಿಮೆಯಾಗುವುದರಲ್ಲಿ ಯಾವುದೇ ಸಂದೇಹವಿಲ್ಲ ಎಂಬುದನ್ನು ಲೇಖಕರು ಅಭಿಪ್ರಾಯವಾಗಿದೆ.

ಭವಿಷ್ಯದಲ್ಲಿ ದೇವದಾಸಿ ಪದ್ಧತಿಯನ್ನು ನಿರ್ಮೂಲನೆಯನ್ನು ಮಾಡಬೇಕಾದರೆ ಅನೇಕ ರೀತಿಯ ಹಾಗೂ ಸೂಕ್ತ ಕಾರ್ಯಕ್ರಮಗಳನ್ನು ತರಬೇಕಾಗುತ್ತದೆ. ಇವುಗಳಲ್ಲಿ ಮುಖ್ಯವಾಗಿ ಸಮಾಜದಲ್ಲಿ ಅದರಲ್ಲಿಯೂ ಸಮಾಜ ಕಾರ್ಯಕರ್ತರಲ್ಲಿ ದೇವದಾಸಿಯರನ್ನು ನಿಜವಾಗಿಯೂ ಈ ಸೆರೆಯಿಂದ ಬಿಡಿಸುವ ಸದುದ್ದೇಶಬೇಕು. ಅಂದಾಗ ಈ ಸಮಾಜ ದೇವದಾಸಿ ಮುಕ್ತ ಸಮಾಜ ಆಗುವುದರಲ್ಲಿ ಯಾವುದೇ ಸಂದೇಹವಿಲ್ಲ.[೧]

## ೨.೩) ಧರ್ಮ ಮತ್ತು ರಾಜಕೀಯ :

ಡಾ|| ಕೆ. ಜಿ. ಗುರುಮೂರ್ತಿ ಯವರು ರಚಿಸಿರುವ "ಧರ್ಮ ಮತ್ತು ರಾಜಕೀಯ" ಎಂಬ ಮೌಲ್ಯಯುತವಾದ ಕೃತಿಯನ್ನು ವಿಮೋಚನಾ ಸಂಘ ಅಥಣಿಯವರು ೨೨ ನೇ ಆವೃತಿಯಾಗಿ ೧೯೯೬ ರಲ್ಲಿ ಹೊರತಂದು ಜನರಿಗೆ ಧರ್ಮ ಎಂದರೇನು? ರಾಜಕೀಯ ಎಂದರೇನು? ಎಂಬುದರ ಬಗ್ಗೆ ತಿಳಿಹೇಳಲು ಮುಂದಾಗಿದ್ದಾರೆ.

ಈ ಕೃತಿಯು ಸಾಹಿತ್ಯ ಚಟುವಟಿಕೆಯಲ್ಲಿ ಸಾಮಾಜಿಕ, ಸಂಸ್ಕೃತಿಕ, ಶೈಕ್ಷಣಿಕ, ಧಾರ್ಮಿಕತೆಯಲ್ಲಿ ಮೌಢ್ಯತೆ ಹಾಗೂ ನ್ಯೂನ್ಯತೆಗಳನ್ನು ಎತ್ತಿ ತೋರಿಸಿದೆ. ಅವುಗಳ ಬದಲಾವಣೆಗಳನ್ನು ಮಾಡುವ ರೀತಿಯನ್ನು ವಿವರಿಸಿದ್ದಾರೆ. ಸಮಾಜದ ಹಿಂದೂಳಿದ ಕೀಳಮಟ್ಟದಲ್ಲಿರುವ ಜನತೆಯಲ್ಲಿ ಪರಿವರ್ತನೆಯ ಗಾಳಿಯನ್ನು ಬೀಸುವ ನಿಟ್ಟಿನಲ್ಲಿ ಸಾದರಪಡಿಸಿದ್ದಾರೆ. ಮಾನವ ನಿಕಾಸದ ಪ್ರಕ್ರಿಯೆಗಳೊಂದಿಗೆ ಬೆಳೆದು ಬಂದ ಧರ್ಮ ಮತ್ತು ರಾಜಕೀಯ ವೈಚಾರಿಕತೆಯ ಅನುಸರಣೆಯಲ್ಲಿ ಹುಟ್ಟಿ ಬೆಳೆದು ಬಂದು ಕಾಲಾಂತರದ ಪ್ರಕ್ರಿಯೆಯಲ್ಲಿ ಇಂದು ಘೋರ ಸಾಮಾಜಿಕ ಸಮಸ್ಯೆಯಾಗಿ ನಿಂತಿರುವ ದೇನದಾಸಿ ಪದ್ಧತಿಯ ಬಗ್ಗೆ ಅರ್ಥ ಪೂರ್ಣವಾದ ವಿಶ್ಲೇಷಣೆಯನ್ನು ನೀಡಿದ್ದಾರೆ.

ಈ ಗ್ರಂಥದಲ್ಲಿ ಒಟ್ಟು ಹತ್ತು ಅಧ್ಯಾಯುಗಳಿವೆ. ಪ್ರಸ್ತಾವನೆಯಲ್ಲಿ ಮುಖ್ಯ ವಿಷಯಗಳ ಬಗೆಗೆ ಚರ್ಚಿಸಲಾಗಿದೆ. ಬೆಳವಣೆಗೆ, ಬದಲಾವಣೆ, ಸಂಸ್ಕರಣ ಪುಣ್ಯ ಕ್ಷೇತ್ರಗಳ ಬಗೆಗೆ ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಶ್ರೀ ರೇಣುಕಾ ಎಲ್ಲಮ್ಮನ ಕ್ಷೇತ್ರದಲ್ಲಿರುವ ಚರಿತ್ರೆ. ರಾಜರು ಮತ್ತು ಧರ್ಮ ನಾಡಿನ ಪರಿಸರ ಸಾಮಾಜಿಕ ರಚನೆಯನ್ನು ಕುರಿತು ಸ್ಪಷ್ಟಪಡಿಸಿದ್ದಾರೆ. ಮೂರನೆಯ ಅಧ್ಯಾಯದಲ್ಲಿ ಪವಿತ್ರ ಕಾರ್ಯಕರ್ತರಾದ ಪೂಜಾರಿಗಳನ್ನು ಕುರಿತು ಅಭ್ಯಾಸ ಮಾಡಲಾಗಿದೆ. ಹಿಂದಿನ ಕಾಲದಲ್ಲಿ ಗೌಡರ ಮನೆತನಕ್ಕೆ ಸಂಬಂದಿಸಿದ ವ್ಯಕ್ತಿಗಳು ಸೇವೆಯನ್ನು ಮಾಡುತ್ತಾ ಬಂದಿದ್ದರು. ಆದರೆ ಬರಬರುತ್ತ ಆ ಸಮುದಾಯವು ವೃತ್ತಿಯಾಗುತ್ತಾ ಹೋಯಿತು ಇವರ ಪೂಜಾರಿಕೆಯ ಹಕ್ಕುಗಳು ಹರಿದು ಹಂಚಿಹೋದವು. ಅವು ಯಾವ ರೀತಿಯಲ್ಲಿ ವಿಭಜನೆಯಾಯಿತು ಎಂಬುದನ್ನು ಆದಾರ ಸಹಿತವಾಗಿ ವಿವರಣೆಯನ್ನು ನೀಡಿದ್ದಾರೆ.

೧. "ಹರಕೆಯ ಹೆಣ್ಣು" ಲೇಖಕರು ಡಾ|| ಕೆ. ಜಿ. ಗುರುಮೂರ್ತಿ ೧೯೯೨ ರಲ್ಲಿ ವಿಮೋಚನಾ ಸಂಘ ಅಥಣಿ.

ನಾಲ್ಕನೆಯ ಅಧ್ಯಾಯದಲ್ಲಿ "ತಾನಿಕರು" ತಾನಿಕರು ಎಂದರೆ ಯಾರು? ಅವರ ಕೆಲಸ ಕಾರ್ಯಗಳು ಎಂತಹವು ಎಂಬುದರ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಿದ್ದಾರೆ. ಎಲ್ಲಮ್ಮನ ಕ್ಷೇತ್ರದಲ್ಲಿ ತಾನಿಕ ಮನೆತನಕ್ಕೆ ಸೇರಿದವರೇ ದೇವತೆಯ ಪೂಜಾರಿಗಳೂ ಆಗಿದ್ದಾರೆ. ಈ ಎರಡು ಹಕ್ಕುಗಳು ಇವರಿಗೆ ಅನುವಂಶಿಕವಾಗಿ ಬಂದವುಗಳು ಎಂಬುದನ್ನು ತೌಲಾನಿಕವಾಗಿ ವಿವರಣೆ ಕೊಟ್ಟಿದ್ದಾರೆ.

ನಾಲ್ಕನೆಯ ಐದನೆಯ ಅಧ್ಯಾಯದಲ್ಲಿ ದೇವತೆಗೆ ತೆಗೆದುಕೊಳ್ಳುವ ಹರಕೆಗಳು ಮತ್ತು ಸೇವೆಗಳನ್ನು ಕುರಿತು ವಿವರಿಸಿದ್ದಾರೆ. ತಾನಿಕರು ಹಾಗೂ ಜೋಗತಿಯರು ಹೇಳಿದ ಮಾತುಗಳನ್ನು ಕೇಳದಿದ್ದರೆ, ಆಗುವ ಕೆಟ್ಟ ಪರಿಣಾಮಗಳ ಕುರಿತು ವಿವರಣೆಯನ್ನು ನೀಡಿದ್ದಾರೆ. ನಿತ್ಯ ಹಾಗೂ ವಿಶೇಷ ಕಾಣಿಕೆಗಳು ಹರಕೆ ರೂಪದಲ್ಲಿ ಪೂಜೆ, ಸೇವೆ ಹಾಗೂ ಆಚರಣೆಗಳನ್ನು ಮಾಡಲ್ಪಡುವ ಇಲ್ಲಿ ಚರ್ಚಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಜೋಗಪ್ಪ ಎಂದರೆ ಯಾರು? ಅವನ ಕಾರ್ಯ ವೈಕರ್ಯವೇನು? ಎಂಬುದ್ನನು ತಿಳಿಸಿದ್ದಾರೆ. ಎಂಟನೆಯ ಅಧ್ಯಾಯದಲ್ಲಿ ಸಂಪೂರ್ಣವಾಗಿ ದೇವದಾಸಿಯರ ಬಗೆಗೆ ಚಿತ್ರಿಸಲಾಗಿದೆ. ದೇವದಾಸಿ ಶಬ್ಧ ಸಂಸ್ಕೃತ ಭಾಷೆಯಿಂದ ಬಂದದ್ದು. ಜಾನಪದಿಯವಾಗಿ ಅಥವಾ ಗ್ರಾಮ್ಯವಾಗಿ ಅವರನ್ನು ಸೂಳೆ, ಬಸವಿಸಾನಿ, ಕಸಬಿ ಅನೇಕ ಹೆಸರುಗಳಿಂದ ಗುರುತಿಸಲ್ಪಟ್ಟಿದ್ದಾರೆಂಬುದನ್ನು ವಿಡಂಬಿಸಿದ್ದಾರೆ. ದೇವದಾಸಿಯನ್ನು ಸೂಳೆ, ಗರತಿ ಹಾಗೂ ಜೋಗತಿ ಎಂದು ಮೂರು ರೀತಿಯಲ್ಲಿ ಮಾಡಲಾಗಿದೆ. ಇದೇ ರೀತಿ ದೇವರ ಸೇವೆಗೆ ಮುತ್ತಿನ ತಾಳಿಯನ್ನು ಕಟ್ಟಿಸಿಕೊಂಡ ಈಕೆಯನ್ನು ವಯೊಮಾನಕ್ಕೆ ಅನುಗುಣವಾಗಿ ಹಾಲು ಮುತ್ತು, ಸೂಳೆ ಮುತ್ತು, ಮತ್ತು ಜೋಗುತಿ ಮುತ್ತು ಕಟ್ಟಿಸಿಕೊಂಡರು ಎಂದು ಮೂರು ಭಾಗ ಮಾಡಲಾಗಿದೆ.

ಸಂಸ್ಕೃತ, ಧಾರ್ಮಿಕ ಸಂಪ್ರದಾಯದಲ್ಲಿ ದೇವದಾಸಿಯರನ್ನು ರಂಭಾ ಮತ್ತು ರೇಣುಕಾ ಎಂದು ಎರಡು ಸಂಪ್ರದಾಯವಾಗಿ ಬಗೆ ಮಾಡಲಾಗಿದೆ. ಮೊದಲನೆಯ ಗುಂಪು ಲಲಿತ ಕಲೆಗೆ, ಎರಡನೆಯ ಗುಂಪು ದೈಹಿಕ ಸುಖದ ಸೇವೆಗೆ ಮೀಸಲಿಟ್ಟವರು. ಅಂದರೆ ದೇವರಿಗೆ ರಂಗ ಮತ್ತು ಅಂಗ ಭೋಗ ನೀಡಲು ಮೀಸಲಾದವರು. ಈ ಕ್ಷೇತ್ರದಲ್ಲಿ ಸಂಪ್ರದಾಯದ ಹೆಸರೇ ಹೇಳುವಂತೆ ರೇಣುಕಾ ಸಂಪ್ರದಾಯದ ದೇವದಾಸಿ ಪದ್ಧತಿಯನ್ನು ಲೇಖಕರು ವಿವಿಧ ಮಗ್ಗಲುಗಳಿಂದ ಚರ್ಚಿಸಿದ್ದಾರೆ. ಇಂದು ಸಂಪ್ರದಾಯವನ್ನು ತೊರೆದು ಸೂಳೆಗಾರಿಕೆ ಮಾಡಲು ಹೋಗುವ ಹುಡುಗಿಯರಿಗೆ ರಹದಾರಿಯಾಗಿ ದೇವದಾಸಿ ದೀಕ್ಷೆ ನೀಡುತ್ತಿದ್ದಾರೆಂದು ಶ್ರೀಯುತರು ವಿಷಾದ ವ್ಯಕ್ತಪಡಿಸಿದ್ದಾರೆ. ಆದರೆ ಜೋಗತಿಯರನ್ನು ತಮ್ಮ ಸೇವೆಗೆಂದು ತೆಗೆದುಕೊಂಡು ಆಕೆಯ ಶೋಷಣೆಯನ್ನು ಮುಂದುವರಿಸಿದ್ದಾರೆ. ಇದಕ್ಕೆ ಭಕ್ತರ ಅಜ್ಞಾನ ಬಡತನ, ಶೋಷಣೆ ಸದಾ ಅನಾವೃಷ್ಟಿ ಹೊಂದಿದ ವಾತಾವರಣವೆ ಪ್ರಮುಖ ಕಾರಣ ಎಂಬ ವಿಷಯಗಳನ್ನು ಡಾ॥ ಕೆ. ಜಿ. ಗುರುಮೂರ್ತಿಯವರು ಅತ್ಯಂತ ಸೊಗಸಾಗಿ ಚಿತ್ರಿಸಿದ್ದಾರೆ.[೧]

---

೧. "ಧರ್ಮ ಮತ್ತು ರಾಜಕೀಯ" ಲೇಖಕರು ಡಾ॥ ಕೆ. ಜಿ. ಗುರುಮೂರ್ತಿ ೧೯೯೬ ರಲ್ಲಿ ವಿಮೋಚನಾ ಸಂಘ ಅಥಣಿ.

## ೨.೪) ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ: (ಒಂದು ಸಾಂಸ್ಕೃತಿಕ ಅಧ್ಯಯನ) :

ಡಾ. ಕಮಲಾ ಹೆಮ್ಮಿಗೆಯವರು ರಚಿಸಿದ "ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ" (ಒಂದು ಸಾಂಸ್ಕೃತಿಕ ಅಧ್ಯಯನ) ಎಂಬ ಮೌಲ್ಯಯುತವಾದ ಸಾಮಾಜಿಕ ಕೃತಿ ಬಂಡಾರವನ್ನು ವಿಮೋಚನಾ ಸಂಘ ಅಥಣಿಯವರು ೨೯ ನೇ ಪ್ರಕಟಣೆಯ ಆವೃತ್ತಿಯನ್ನು ಹೊರತಂದಿದ್ದಾರೆ. ಈ ಆವೃತ್ತಿಯ ಅಧ್ಯಯನದ ಉದ್ದೇಶವೇನು? ಮತ್ತು ಎಲ್ಲಮ್ಮನ ಪರಂಪರೆಯು ಯಾವ ರೀತಿಯಲ್ಲಿ ಹುಟ್ಟಿ ಬೆಳವಣಿಗೆಯನ್ನು ಪಡೆದುಕೊಂಡಿತು. ಅಲ್ಲಿರುವ ಚೌಡಕಿಯ ಪದಗಳು, ದೇವದಾಸಿಯ ಪದ್ಧತಿ ಹೀಗೆ ಹತ್ತು ಹಲವು ದೃಷ್ಟಿಕೋನಗಳನ್ನು ಹೊತ್ತುಕೊಂಡಿರುವ ಈ ಕೃತಿಯು ಸಾಮಾಜಿಕ ಆವೃತ್ತಿಯಾಗಿ ಹೊರತರುವಲ್ಲಿ ಲೇಖಕರು ಮತ್ತು ವಿಮೋಚನಾ ಸಂಘವು ಯಶಸ್ವಿಯಾಗಿದೆ.

ನಮ್ಮ ದೇಶದಲ್ಲಿ ಭಕ್ತಿಗೆ ಬರಗಾಲವಿಲ್ಲ. ಆದರೆ ನೀತಿಗೆ ನೆಲೆಯಿಲ್ಲ. ಮನುಷ್ಯ ತನ್ನ ದೌರ್ಬಲ್ಯಗಳಿಗೆ ಅಂಜಿಕೊಂಡು ಅಥವಾ ಅವುಗಳನ್ನು ಸಮರ್ಥಿಸಿಕೊಳ್ಳಬೇಕೆಂದು ಕೆಲವು ಬೇರೆ ಬೇರೆ ರೀತಿಯಲ್ಲಿ ದೇವತೆಗಳನ್ನು ಸೃಷ್ಟಿಮಾಡಿದನು. ಅದರ ಜೊತೆಯಲ್ಲಿಯೇ ಕೆಲವೊಂದು ವ್ಯಭಿಚಾರಿ ದೇವತೆಗಳನ್ನು ಸಹ ಸೃಷ್ಟಿ ಮಾಡಿದನು. ಅವುಗಳಿಗೆ ಪೌರಾಣಿಕವಾದ ಹಿನ್ನೆಲೆಯನ್ನು ರೂಪಿಸಿ ಪುಣ್ಯ-ಪುರಾಣವಾಗಿ, ಪುಣ್ಯ-ಪ್ರವಚನವಾಗಿ ಸ್ವರ್ಗಕ್ಕೆ ದಾರಿ ತೋರುತ್ತಲಿದೆ. ಹೀಗಾಗಿ ದೇವತೆಗಳ ಹೆಸರಿನಲ್ಲಿ ವ್ಯಭಿಚಾರಕ್ಕೆ ಮುಕ್ತ ಪ್ರಮಾಣ ಪತ್ರ ದೊರೆತಂತಾಗಿದೆ. ಈ ಅಂಶವು ಎಲ್ಲಮ್ಮನ ಸಂಪ್ರದಾಯಕ್ಕೆ ಸೂಕ್ತವಾಗಿ ಅನ್ವಯವಾಗುತ್ತವೆಂಬುದನ್ನು ಲೇಖಕರು ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ.

ಈ ಕೃತಿಯಲ್ಲಿ ಎಲ್ಲಮ್ಮನ ಕಾಲ್ಪನಿಕ ಚರಿತ್ರೆಯನ್ನು ಕೂಡ ಅನೇಕ ಪೌರಾಣಿಕ ಪರಿಕಲ್ಪನೆಗಳಿಗೆ ಹೊಂದಿಸಿ ಹೆಣೆಯಲಾಗಿದೆ. ಎಲ್ಲಮ್ಮ ದೇವತೆಯ ಹೆಸರಿನ ಮೇಲೆ ಅನೇಕ ಅವ್ಯವಹಾರಿಕ, ಅನೈತಿಕ, ಅನಾರೋಗ್ಯಕರ, ಕಂದಾಚಾರ, ಮೂಡನಂಬಿಕೆಗಳ ಬಗೆಗೆ ಜನತೆಯಲ್ಲಿ ಒಂದು ವಾಸ್ತವ ಪ್ರಜ್ಞೆಯನ್ನು ಮೂಡಬೇಕಾಗಿದೆ. ಈ ಸಂಪ್ರದಾಯದ ನೆಪದಲ್ಲಿ ಹಿಂದುಳಿದ ಜನಾಂಗದ ತರುಣಿಯರು ತಮ್ಮ ಮೈಮಾರುವ ಹೀನ ಕಾರ್ಯಕ್ಕೆ ಇಳಿದು ಸಾಮಾಜಿಕ ಮಾನಸಿಕ ಹಾಗೂ ದೈಹಿಕ ಆರೋಗ್ಯಕ್ಕೆ ಪಿಡುಗಾಗದಂತೆ ತೋರುತ್ತಿದೆ. ಈ ನಿಟ್ಟಿನಲ್ಲಿ ಲೇಖಕರು ಬಹಳ ಪರಿಶ್ರಮ ವಹಿಸಿ ಸಮಾಜದ ಮೌಢ್ಯವನ್ನು ತೊಲಗಿಸಲು ಪ್ರಯತ್ನಪಟ್ಟಿದ್ದಾರೆ.

ಈ ಒಂದು ಆವೃತ್ತಿಯಲ್ಲಿ ದೇವರ ಹೆಸರಿನಲ್ಲಿ ತರುಣರು ಮಾಡತಕ್ಕಂತಹ ವಿಷಯವೇನೆಂದರೆ ದೇವರ ಹೆಸರಿನಲ್ಲಿ ತರುಣ ಮಹಿಳೆಯರನ್ನು ಯಾವ ರೀತಿಯಲ್ಲಿ ಕ್ರೂರವಾಗಿ ಶೋಷಣೆಯನ್ನು ಮಾಡುತ್ತಿದ್ದರು ಎಂಬುದನ್ನು ಲೇಖಕರು ದೃಢೀಕರಿಸಿದ್ದಾರೆ. ಅವರ ಬರವಣಿಗೆಯ ಮುಖ್ಯ ಉದ್ದೇಶವೆಂದರೆ ಹಿಂದುಳಿದ ದಲಿತ ಮಹಿಳೆಯರ ಮೇಲೆ ನಡೆಯುವ ಶೋಷಣೆಯನ್ನು ತಡೆಗಟ್ಟುವ ನಿಟ್ಟಿನಲ್ಲಿ ಲೇಖಕಿಯು ಪುರುಷ ವರ್ಗದ ದಮನಕಾರಿ ರೀತಿಯ ಮುಖವಾಡಗಳನ್ನು ಕಳಚುವುದರಲ್ಲಿ ಲೇಖಕಿಯು ಪ್ರಯತ್ನಪಟ್ಟಿದ್ದಾರೆ. ಈ ನಿಟ್ಟಿನಲ್ಲಿ ವಿಮೋಚನಾ ಸಂಘ ಅಥಣಿಯವರು ಪ್ರಕಟಿಸಿದ ಕೃತಿಯು ತುಂಬಾ ಮೌಲ್ಯಯುತವಾಗಿದೆಯೆಂದು ಹೇಳಬಹುದು.[೧]

---

೧. "ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ" (ಒಂದು ಸಾಂಸ್ಕೃತಿಕ ಅಧ್ಯಯನ)
ಲೇಖಕಿ: ಡಾ. ಕಮಲಾ ಹೆಮ್ಮಿಗೆ ೧೯೯೪ ರಲ್ಲಿ ವಿಮೋಚನಾ ಸಂಘ ಅಥಣಿ.

## ೨.೫) ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು :
## (ಒಂದು ಸಾಂಸ್ಕೃತಿಕ ಅಧ್ಯಯನ) :

ಡಾ. ವೀರೇಶ ಬಡಿಗೇರರವರು ರಚಿಸಿರುವ "ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು" (ಒಂದು ಸಾಂಸ್ಕೃತಿಕ ಅಧ್ಯಯನ) ಎಂಬ ಹಳ್ಳಿಯ ಸೋಗಡಿನ ಕೃತಿಯನ್ನು ೧೯೯೯ ರಲ್ಲಿ ವಿಮೊಚನಾ ಸಂಘ ಅಥಣಿಯವರು ಗ್ರಂಥ ಕುಸುಮವನ್ನು ಲೋಕಾರ್ಪಣೆ ಮಾಡಿದ್ದಾರೆ.

ಈ ಕೃತಿಯು ಒಳಗೊಂಡಿರುವ ಪ್ರಮುಖವಾದ ಅಂಶಗಳೆಂದರೆ 'ಚೌಡಿಕೆ ಮೇಳ', 'ಗೊಂದಲಿಗರ ಮೇಳ', 'ಡೊಳ್ಳು ಮೇಳ', 'ಭಜನೆ ಮೇಳ', 'ಗೀ ಗೀ ಮೇಳ'ಗಳ ಕುರಿತು ಪರಿಪೂರ್ಣವಾದ ಮಾಹಿತಿಯನ್ನು ಚಿತ್ರಿಸಿದ್ದಾರೆ. ಮಾನವ ವೈಚಾರಿಕತೆಯನ್ನು ಮುಂದಿನ ದಿನಮಾನಗಳಲ್ಲಿ ಯಾವ ರೀತಿ ತನ್ನಂದರಲ್ಲಿ ಅಳವಡಿಸಿಕೊಂಡು ಬೆಳೆಸಿಕೊಳ್ಳಬೇಕು ಎಂಬುದರ ಬಗ್ಗೆ ಈ ಗ್ರಂಥವು ಆಕರ ಸ್ವರೂಪವನ್ನು ಒದಗಿಸುವ ನಿಟ್ಟಿನಲ್ಲಿ ಮಹತ್ವಪೂರ್ಣ ಕೃತಿಯು ಇದಾಗಿದೆ.

ಜಾನಪದದ ಒಡನಾಡದಲ್ಲಿ ಬಾಗಿಯಾಗಿ ಅವರ ಭಾವನೆಗಳಿಗೆ ಸ್ಪಂದಿಸಿ ತಮ್ಮ ಭಾವನೆಗಳನ್ನು ಅವರ ಜೊತೆಯಲ್ಲಿ ಹಂಚಿಕೊಂಡು ಜನಪದಿಯರ ಸಂಸ್ಕೃತಿಗಳಲ್ಲಿನ ಅಧಿಕೃತವಾದ ಮೌಲ್ಯಗಳನ್ನು ಹಾಗೂ ಸಮೃದ್ಧತೆಯನ್ನು ಕಂಡುಹಿಡಿಯಲು ಪ್ರಯತ್ನಿಸಿದ್ದಾರೆ. ಡಾ. ವೀರೇಶ ಬಡಿಗೇರರವರು ತೀವ್ರ ಆಸಕ್ತಿಯಿಂದ ಪ್ರತಿಯೊಂದು ಮೇಳಗಳ ಪರಿಪೂರ್ಣ ಮಾಹಿತಿಯನ್ನು ಕಲೆಹಾಕಿದ್ದಾರೆ.

ಅಧ್ಯಾಯ ಒಂದರಲ್ಲಿ ಈ ಮೇಳಗಳ ಆದ್ಯಯನ ಮಾಡುವ ಉದ್ದೇಶವಾದರು ಏನಿತ್ತು? ಎಂಬುದರ ಬಗ್ಗೆ ತಿಳಿಸಿದ್ದಾರೆ. ಅದರ ಜೊತೆಯಲ್ಲಿ ಅಧ್ಯಯನದ ವ್ಯಾಪ್ತಿಯು ಎಷ್ಟರ ಮಟ್ಟಿಗೆ ವಿಶಾಲವಾಗಿದೆ ಎಂಬುದನ್ನು ಇಲ್ಲಿ ಅರಿಯಬಹುದಾಗಿದೆ. ಉತ್ತರ ಕರ್ನಾಟಕದ ಜನಪದ ಮೇಳಗಳಲ್ಲಿ ಐದು ವಿಧವಾಗಿ ವಿಂಗಡಿಸಿದ್ದಾರೆ. ಚೌಡಿಕೆ ಮೇಳ, ಗೊಂದಲಿಗರ ಮೇಳ, ಡೊಳ್ಳು ಮೇಳ, ಭಜನೆ ಮೇಳ, ಗೀಗೀ ಮೇಳ ಈ ಎಲ್ಲ ಮೇಳಗಳನ್ನು ಕುರಿತು ಲೇಖಕರು ಸ್ಪಷ್ಟನೇ ನೀಡಿದ್ದಾರೆ.

ಅಧ್ಯಾಯ ಎರಡರಲ್ಲಿ ಚೌಡಿಕೆ ಮೇಳಗಳ ಕುರಿತು ಅವಲೋಕಿಸಿದ್ದಾರೆ. ಚೌಡಿಕೆಯ ಮೇಳಗಳ ಸಾಂಸ್ಕೃತಿಕವಾದ ಹಿನ್ನೆಲೆಯೇನು? ಅವರು ಹಾಡುವ ಸ್ವರೂಪವು ಎಂತಹದು ಪರಿಕರಗಳು, ಪ್ರದರ್ಶನದ ತೌಲನಿಕ ಅದ್ಯಯನ, ಅದರ ಕಾರ್ಯಗಳು ಯಾವವು ಎನ್ನುವ ಅಂಶಗಳ ಮೇಲೆ ಕ್ಷೇತ್ರ ಕಾರ್ಯ ಕೈಗೊಂಡು ವಿಶ್ಲೇಷಣಾತ್ಮಕ ವರಧಿಯನ್ನು ಈ ಗ್ರಂಥದಲ್ಲಿ ಅಳವಡಿಸಿದ್ದಾರೆ.

ಅಧ್ಯಾಯ ಮೂರರಲ್ಲಿ ಬಡಿಗೇರರವರು ಗೊಂದಲಿಗರ ಮೇಳಗಳ ಕುರಿತು ಮಾಹಿತಿಯ ಕೂಡಿಸುವ ಕಾರ್ಯವನ್ನು ಮಾಡುವಲ್ಲಿ ತುಂಬಾ ಪರಿಶ್ರಮಪಟ್ಟಿದ್ದಾರೆ. ಗೊಂದಲಿಗರ ಸಾಂಸ್ಕೃತಿಕವಾದ ಹಿನ್ನೆಲೆಯೇನು? ಹಾಡುಗಾರಿಕೆ ಮತ್ತು ಕಥನ ಸ್ವರೂಪವು ಎಂತಹದು, ಆಟದ ಪ್ರದರ್ಶನದ ರೀತಿಯು ಹೇಗಿರುತ್ತದೆ. ಅವರ ಕಾರ್ಯ ವೈಕರ್ಯ ಎಂತಹದು ಎಂಬುದನ್ನು ವಿಶ್ಲೇಷಿಸಿದ್ದಾರೆ.

ಅಧ್ಯಾಯ ನಾಲ್ಕರಲ್ಲಿ ಶ್ರೀಯುತರು ಡೊಳ್ಳು ಮೇಳಗಳನ್ನು ಕುರಿತು ಅವಲೋಕಿಸಿದ್ದಾರೆ. ಇಲ್ಲಿ ಕುರುಬ ಜನಾಂಗದವರು ಸಾಂಸ್ಕೃತಿಕವಾದ ಚಾರಿತ್ರಿಕ ಹಿನ್ನೆಲೆಯನ್ನು ಕುರಿತು ಅವಲೋಕಿಸಿದ್ದಾರೆ. ಡೋಳ್ಳು ಮೇಳಿನ ಹಾಡುಗಾರಿಕೆಯ ಸ್ವರೂಪವು ಎಂತಹದು ಹಿಮ್ಮೇಳಗಳ ಪರಿಕರಗಳು ಪ್ರದರ್ಶನದ ತೌಲನಿಕ ಅಧ್ಯಯನ ಡೊಳ್ಳು ಮೇಳಗಳ ಕಾರ್ಯಗಲನ್ನು ಓದುಗರ ಮನ ತಟ್ಟುವಂತೆ ಚಿತ್ರಿಸಿದ್ದಾರೆ.

ಐದನೆಯ ಅಧ್ಯಾಯದಲ್ಲಿ ಭಜನೆ ಮೇಳಗಳ ಸಾಂಸ್ಕೃತಿಕ ಹಿನ್ನೆಲೆ, ಅದರ ಸ್ವರೂಪ, ಪರಿಕರ, ವಿಧಗಳು ತೌಲಾನಿಕ ಅಧ್ಯಯನ, ಭಜನೆಯ ಕಾರ್ಯಗಳು ಯಾವ ರೀತಿಯಲ್ಲಿ ಮೂಡುತ್ತವೆ ಎಂಬುದನ್ನು ಅರಿಯಬಹುದು. ಗೀಗೀ ಮೇಳದ ಹಿನ್ನೆಲೆಯನ್ನು ಅದರ ಸ್ವರೂಪ, ಪರಿಕರಗಳು ತೌಲನಿಕ ಅಧ್ಯಯನ ಹೀಗೆ ಐದು ಮೇಳಗಳನ್ನು ಕುರಿತು ಉತ್ತರ ಕರ್ನಾಟಕದಲ್ಲಿ ಕ್ಷೇತ್ರಕಾರ್ಯ ಕೈಕೊಂಡು ಜನಪದರ ಸೊಗಡನ್ನು ಅತ್ಯಂತ ಸೋಗಸಾಗಿ ವಿವರಿಸಿದ್ದಾರೆ.

ಉತ್ತರ ಕರ್ನಾಟಕದಲ್ಲಿ ಅತೀ ಹೆಚ್ಚು ಜನಪ್ರಿಯವಾಗಿರುವ ಇಲ್ಲಿನ ಐದು ಗೀತ ಮೇಳಗಳನ್ನು ಆಳವಾಗಿ ಅಧ್ಯಯನವನ್ನು ಮಾಡಿದವರು ಡಾ. ವಿರೇಶ ಬಡಿಗೇರರವರು ಈ ಅಧ್ಯಯನದಲ್ಲಿ ದಿಟ್ಟ ಹೆಜ್ಜೆಯನ್ನು ಇಟ್ಟು ದೇಶಿ ಸಂಸ್ಕೃತಿಗಳ ಬಗ್ಗೆ ಆಸಕ್ತಿ ತೋರಿಸಿ ವಿನೂತನ ರೀತಿಯಲ್ಲಿ ವಿಡಂಬಡಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಆಧುನಿಕತೆಯ ದಮನಕಾರಿ ಪ್ರವೃತ್ತಿಯಿಂದ ಜನಪದ ಜಗತ್ತಿನ ನಂಬಿಕೆ, ಶ್ರದ್ಧೆ, ಸಮೃದ್ಧತೆಗಳನ್ನು ಒಂದು ಸಂಯೋಜಕ ಪ್ರತಿಬಿಂಭವನ್ನಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.[೧]

## ೨.೬) ದು. ನಿಂ. ಬೆಳಗಲಿ ಬದುಕು – ಬರಹ : ಒಂದು ಅದ್ಯಯನ :

ಡಾ. ಎಸ್. ಬಿ. ಮಲೋಳಿಯವರು ರಚಿಸಿದ "ದು. ನಿಂ. ಬೆಳಗಲಿ ಬದುಕು – ಬರಹ : ಒಂದು ಅಧ್ಯಯನ" ಎಂಬ ಕೃತಿ ಕುಸುಮವನ್ನು ಮಿಮೋಚನಾ ಸಂಘ ಅಥಣಿಯವರು ೩೩ ನೇ ಪ್ರಕಟನೆಯಾಗಿ ಲೋಕಾರ್ಪಣೆ ಮಾಡಿದ್ದಾರೆ.

ದು. ನಿಂ. ಬೆಳಗಲಿಯವರ ಆಡುವ ಮಾತುಗಳು ಸುಂದರ. ಅವರ ನಡೆಯೂ ಇನ್ನೂ ಚೆನ್ನ. ಸಮಗ್ರ ಸ್ವರೂಪ ಎತ್ತ ನೋಡಿದರೆತ್ತ ಸುಮಧುರ. ಮುಂದಿನ ದಿನಮಾನಗಳಲ್ಲಿ ಯುವ ಪೀಳಿಗೆಗೆ ಆದರ್ಶಪ್ರಾಯವೆನಿಸಿದ ಅವರ ಬದುಕು ಬರಹಗಳ ಕುರಿತು ಲೇಖಕರು ತುಂಬಾ ಸೋಗಸಾಗಿ ಚಿತ್ರಿಸಿದ್ದಾರೆ. ಕೆಂಗಲದಲ ಪರಿಸರದೊಳೋದು ಮರ, ಬಿಸಿಲ, ಬೇಗುವಿ, ಮನೆಸಿ ನೆಮ್ಮದಿಯ ನೀಡುವುದು ಈ ಕೃತಿಯ ನೆರಳು ಅಷ್ಟೊಂದು ಸೋಗಸಾಗಿ ಮೂಡಿದೆ.

---

೧. "ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು" (ಒಂದು ಸಾಂಸ್ಕೃತಿಕ ಅಧ್ಯಯನ)
ಲೇಖಕರು: ಡಾ. ವಿರೇಶ ಬಡಿಗೇರ ೧೯೯೯ ರಲ್ಲಿ ವಿಮೋಚನಾ ಸಂಘ ಅಥಣಿ.

ಪ್ರಬಲವಾದ ಸಾಮಾಜಿಕ ಸಮಸ್ಯೆಯೊಂದನ್ನು ದಲಿತ ಜೀವನದ ಹಾಸುಹೊಕ್ಕಿನಲ್ಲಿ ನೆಯ್ದು ದೇವದಾಸಿ ಕಾದಂಬರಿ ಸಂಪ್ರದಾಯದಲ್ಲಿರುವ ಕೇಡನ್ನು ಕಥೆಗೆ ಊನವಾಗದಂತೆ ಮೂಡಿಸಿರುವ ಮಹತ್ವದ ಕೃತಿಯಾಗಿದೆ. ಬದುಕಿನ ವೈವಿಧ್ಯಮಯ ಅನುಭವಪಡೆದ ದು. ನಿಂ. ಬೆಳಗಲಿಯವರಿಗೆ ಕರ್ನಾಟಕದ ಒಳಹೊರಗಿನ ಸಾಹಿತ್ಯ ದಿಗ್ಗಜರ ಆತ್ಮೀಯರ ಪರಿಚಯವಿರುದವರ ಬಗ್ಗೆ ಚಿತ್ರಿಸಿದ್ದಾರೆ. ಹುಟ್ಟು ಪ್ರತಿಭಾಶಾಲಿಗಳಾದ ಅವರು ಸುಮಾರು ೫೩ ಕೃತಿಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸಿದ ಬಗೆಯನ್ನು ನೋಡಬಹುದು. ಬೆಳಗಲಿಯವರ ಚಲನಶೀಲ ಆಶಯಗಳಿಂದಾಗಿ ಅವರ ಕೃತಿಗಳು ಮೌಲ್ಯಯುತವಾದವಗಳಾಗಿವೆ. ಸಧಾ ಅಧ್ಯಯನಶೀಲರೂ, ಚಿಂತನಶೀಲರೂ ಆದ ಬೆಳಗಲಿ ಅವರು ಸಾಹಿತ್ಯಕ್ಕಿಂತ ಸಜ್ಜನಿಕೆಯ ಬದುಕು ದೊಡ್ಡದೆಂದು ನಂಬಿಕೊಂದಿದ್ದವರು. ಅಂತಹ ದಿಗ್ಗಜನ ಕುರಿತು ಹೊರಬಂದ ಈ ಕೃತಿಯು ಅತ್ಯಂತ ಮೌಲ್ಯಯುತವಾಗಿದೆ.

ಸೌಮ್ಯವಾದ ಮುಖ, ಚಿಂತನಶೀಲವಾದ ಕಣ್ಣುಗಳು, ಆಡಂಬರ ರಹಿತವಾದ ವೇಷಭೂಷಣ ಮತ್ತು ಜೀವಶೈಲಿ, ಮಧುರವಾದ ಮಾತುಗಳು, ಸ್ನೇಹಬರಿತವಾದ ಅವರ ಮನಸ್ಸು. ಇವು ಬೆಳಗಲಿಯವರ ವ್ಯಕ್ತಿತ್ವಕ್ಕಿರುವ ವೈಶಿಷ್ಠ್ಯಗಳು ಅವರ ಆತ್ಮಿಯರು ಅವರನ್ನು 'ದುನಿಂಬೆ' ಎಂದು ಕೂಗುತ್ತಿದ್ದರು ಎಂಬುದನ್ನು ಈ ಗ್ರಂಥದಿಂದ ನಮಗೆ ಅರಿವಾಗುತ್ತದೆ. ಕನ್ನಡ ಜ್ಞಾನದ ಜೊತೆಗೆ ಹಿಂದಿ ಮತ್ತು ಮರಾಠಿ ಭಾಷೆಗಳ ಜ್ಞಾನ ಅವರಿಗಿತ್ತು. ಇದರಿಂದಾಗಿ ಅವರ ಓದಿನ ವ್ಯಾಪ್ತಿ ಹಿರಿದಾಗಿತ್ತು, ಸಂವಹನದ ಮಾರ್ಗ ಸುಗಮವಾಗಿತ್ತು. ಯಾವುದೇ ಒಂದು ಸಾಹಿತ್ಯ ಪಂಥಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಳ್ಳದಿರುವುದು ಬೆಳಗಲಿಯವರ ಆರೋಗ್ಯವಂತ ಮನಸ್ಸಿನ ಪ್ರಮುಖ ಲಕ್ಷಣವಾಗಿದೆ ಎಂಬುದು ಈ ಕೃತಿಯಿಂದ ಓದುಗರಿಗೆ ಅರಿವಾಗುತ್ತದೆ.

ಬೆಳಗಲಿಯವರ ಬರಹ ಎಂತಹದೆಂದರೆ ಮಧ್ಯಮ, ಕೆಳಮಧ್ಯಮ ಮತ್ತು ರೋಷಿತ ಜನಾಂಗದ ಜೀವನವನ್ನು ಕುರಿತು ಕೃತಿಗಳನ್ನು ರಚಿಸಿರುವದು ಮುಖ್ಯವಾದ ಸಂಗತಿ ಎನ್ನಬಹುದು. ಡಾ. ಮಟೋಳಿಯವರು ಶ್ರೀಗಂದದಂತಹ ಸುವಾಸನೆಯನ್ನು ಈ ಕೃತಿಯ ಮೂಲಕ ನಾಡಿಗೆ ಉಣಬಡಿಸುತ್ತಿದ್ದಾರೆ.

ಏಳು ಅಧ್ಯಾಯಗಳಲ್ಲಿ ಚಾಚಿರುವ ಈ ಗ್ರಂಥವು ಬೆಳಗಲಿಯವರ ಬದುಕು-ಬರಹಗಳನ್ನು ಕುರಿತು ಚೆನ್ನಾಗಿ ಪರಿಚಯಿಸಿಕೊಟ್ಟಿದ್ದಾರೆ. ಆರಂಭದಲ್ಲಿ ಬನಹಟ್ಟಿಯ ಪರಿಸರ ಬೆಳಗಲಿ ಕುಟುಂಬದ ಹಿನ್ನೆಲೆಗಳನ್ನು ವಿವರಿಸಲಾಗಿದೆ. ಅಧ್ಯಾಯ ಮೂರು, ನಾಲ್ಕು, ಐದರಲ್ಲಿ ಬೆಳಗಲಿ ಅವರ ಬಹುಮುಖ ಸಾಹಿತ್ಯ ಸೇವೆಯನ್ನು ವಿಶ್ಲೇಷಣೆಗೆ ಗುರಿಪಡಿಸಲಾಗಿದೆ. ತಮ್ಮ ಸುತ್ತಲಿನ ಬದುಕಿನ ವಾಸ್ತವ ಅನುಭವಗಳನ್ನೇ ಬೆಳಗಲಿ ಅವರು ತಮ್ಮ ಕೃತಿಗಳಲ್ಲಿ ಬಳಸಿಕೊಂಡಿರುವುದನ್ನು ಡಾ. ಮಟೋಳಿ ಅವರು ಪ್ರಬಂಧದುದ್ದಕ್ಕೂ ವಿವರಿಸುತ್ತಾ ಹೋಗಿದ್ದಾರೆ. ಬೆಳಗಲಿಯವರ ಕಥೆ-ಕಾದಂಬರಿಗಳು ಪ್ರಜ್ಞಾವಂತರನ್ನು ಚಿಂತನೆಗೆ ಗುರಿಪಡಿಸುತ್ತವೆ ಎಂಬುದನ್ನು ಈ ಗ್ರಂಥದಿಂದ ತಿಳಿಯಬಹುದು. ಮಕ್ಕಳ ಸಾಹಿತ್ಯ ಕೃತಿಗಳು ಎಳೆಯ ಮನಸ್ಸುಗಳಿಗೆ ಸಂಸ್ಕಾರ ನೀಡಲು ಪ್ರಯತ್ನಿಸುತ್ತವೆಂಬುದನ್ನು

ಲೇಖಕರು ಸ್ಪಷ್ಟಪಡಿಸಿದ್ದಾರೆ. ಈ ಪ್ರಬಂಧವು ಎಲ್ಲಂದರಲ್ಲಿಯೂ ಸ್ಪಷ್ಟವಾದ ಮಾಹಿತಿಯನ್ನು ಕುರಿತು ನುಡಿಯ ಗೌರವವನ್ನು ಲೇಖಕರು ಸ್ಪಷ್ಟ ನುಡಿಗಳನ್ನಾಡಿದ್ದಾರೆ.

ಮೊದಲ ಅಧ್ಯಯದಲ್ಲಿ ಸೃಜನಶೀಲ ಪ್ರಜ್ಞೆ, ಒಬ್ಬ ವ್ಯಕ್ತಿಯಲ್ಲಿ ವೈವಿಧ್ಯಮಯವಾಗಿ, ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಳ್ಳುವುದು ಬಹಳ ಅಪರೂಪ. ಅಂಥ ಅಪರೂಪದ ಸಾಹಿತ್ಯ ನಿರ್ಮಾಣ ಮಾಡಿದವರಲ್ಲಿ ಬನಹಟ್ಟಿಯ ಶ್ರೀ ಬೆಳಗಲಿಯವರು ಒಬ್ಬರು ಎಂಬುದನ್ನು ನಿರೂಪಿಸಿದ್ದಾರೆ. ಎಲೆ ಮರೆಯ ಕಾಯಿಯಂತೆ ೬೯ ವರ್ಷಗಳ ಕಾಲ ಬದುಕಿದ ಅವರ ಬದುಕು ಸಾರ್ಥಕವಾದುದು. ವಿದ್ಯಾರ್ಥಿ ದೆಸೆಯಿಂದಲೇ ಬರಹದ ಗೀಳು ಅಂಟಿಸಿಕೊಂಡ ಅವರು ವೃತ್ತಿಯಿಂದ ಶಿಕ್ಷಕರಾಗಿ, ಪ್ರವೃತ್ತಿಯಿಂದ ಸಾಹಿತಿಗಳಾಗಿ ಬೆಳೆದವರು ಸಾಹಿತ್ಯ ಲೋಕಕ್ಕೆಲ್ಲ 'ದುನಿಂಬೆ' ಎಂದೇ ಪರಿಚಿತರಾದ ಬೆಳಗಲಿಯವರ ಜೀವನ ದರ್ಶನವನ್ನು ಸಂಪೂರ್ಣವಾಗಿ ನೀಡಿದ್ದಾರೆ. ಬೆಳಗಲಿಯವರು ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದವರ ಸಂಖ್ಯೆ ಉತ್ತರ ಕರ್ನಾಟಕದಲ್ಲಿ ಹೇರಳವಾಗಿದೆ. ಹತ್ತು ಹಲವು ಪ್ರಕಾರಗಳಲ್ಲಿ ಮೌಲಿಕ ಕೃತಿಗಳನ್ನು ನೀಡಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಕ್ರಿ.ಶ. ೧೯೫೭ ರಿಂದ ಮೊದಲುಗೊಂಡು ೨೦೦೦ ದವರೆಗೆ ಸುಮಾರು ನಾಲ್ಕು ದಶಕಗಳಿಗೂ ಮಿಕ್ಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬೆಳೆದು ಸಿದ್ಧಿಯ ಶಿಖರ ಮುಟ್ಟಿದ ಕೀರ್ತಿ ಅವರದು. ಆದರ್ಶ ಶಿಕ್ಷಕರಾಗಿ ಬದುಕಿ ರಾಜ್ಯ, ರಾಷ್ಟ್ರ ಪ್ರಶಸ್ತಿಗಳನ್ನು ಪಡೆದ ಬೆಳಗಲಿಯವರು ಅತ್ಯಂತ ಶ್ರೇಷ್ಠ ವ್ಯಕ್ತಿತ್ವ ಹೊಂದಿದವರಾಗಿದ್ದಾರೆನ್ನುವ ಮಾಹಿತಿಯನ್ನು ನೀಡಿದ್ದಾರೆ. ಇಂದು ಉತ್ತರ ಕರ್ನಾಟಕದಲ್ಲಿ ಎದ್ದು ಕಾಣುವ ಬರಹಗಾರರಲ್ಲಿ ದು. ನಿಂ. ಬೆಳಗಲಿಯವರಿಗೆ ಅಗ್ರ ಪ್ರಾಶಸ್ತ್ಯವಿದೆ. ಹೊಸಗನ್ನಡ ಗದ್ಯ ಸಾಹಿತ್ಯದಲ್ಲಿ ವೈವಿಧ್ಯತೆ ಹಾಗೂ ವ್ಯಾಪಕತೆಯನ್ನು ಅವರ ಸಾಹಿತ್ಯ ಕೃತಿಗಳು ಮೂಡಿಸಿವೆ. ನವೋದಯ ಸಾಹಿತ್ಯದ ಬೆಳವಣಿಗೆಯ ಹಂತದಿಂದ ಹಿಡಿದು ನವ್ಯ-ನವ್ಯೋತ್ತರ ಸಾಹಿತ್ಯ ಪಂಥಗಳಲ್ಲಿ ಸ್ಪಂದಿಸಿದ ಕೆಲವೇ ಕೆಲವು ಲೇಖಕರಲ್ಲಿ ಬೆಳಗಲಿಯವರು ಒಬ್ಬರು ಎಂಬುದನ್ನು ಲೇಖಕರು ಮೊದಲ ಅಧ್ಯಾಯದಲ್ಲಿ ವಿವರಣಾತ್ಮಕವಾದ ವಿವರಣೆಯನ್ನು ನೀಡಿದ್ದಾರೆ.

ಅಧ್ಯಾಯ ಎರಡರಲ್ಲಿ ಲೇಖಕರು ಬನಹಟ್ಟಿಯ ಪರಿಸರವನ್ನು ಕುರಿತು ವಿವರಣೆಯನ್ನು ನೀಡಿದ್ದಾರೆ. ಬನಹಟ್ಟಿಯ ಐತಿಹಾಸಿಕ ಹಿನ್ನೇಲೆಯನ್ನು ಕುರಿತು ವಿವರಣೆಯನ್ನು ನೀಡಿದ್ದಾರೆ. ಸುಮಾರು ಕ್ರಿ.ಶ. ೯೫ ರಲ್ಲಿ ಬನಹಟ್ಟಿಯ ರುದ್ರಭಟನು ರಾಜನಾಗಿದ್ದನು ಎಂಬುದನ್ನು ಉಲ್ಲೇಖಿಸಿದ್ದಾರೆ. ಅದು ಅಲ್ಲದೆ 'ಕಾವ್ಯಾಲಂಕಾರ' ಎಂಬ ಕೃತಿಯನ್ನು ಸಹ ಅದೇ ರಾಜನು ರಚಿಸಿದ್ದಾನೆಂಬುದನ್ನು ಈ ಅಧ್ಯಾಯದಿಂದ ತಿಳಿಯಬಹುದು. ಬನಹಟ್ಟಿ ಪರಿಸರವು ಎಂತಹ ವೈವಿಧ್ಯತೆಯಿಂದ ಕೂಡಿದೆ ಎಂಬುದನ್ನು ಸಹ ಅವಲೋಕಿಸಲಾಗಿದೆ. ಈ ಪರಿಸರದಲ್ಲಿಯ ದಿಗ್ಗಜರ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಬನಹಟ್ಟಿಯ ಮಣ್ಣಿನ ಗುಣವೋ ಅಥವಾ ದೇವರ ಕೃಪೆಯೋ ಗೊತ್ತಿಲ್ಲಾ. ಅಲ್ಲಿ ಸಾಹಿತ್ಯಿಕವಾಗಿ ಹಾಗೂ ಅಧ್ಯಾತ್ಮಿಕವಾಗಿ ಸೇವೆಯನ್ನು ಸಲ್ಲಿಸಿದ ಮಹನೀಯರ ಪಟ್ಟಿಯು ಅಪಾರ ಪ್ರಮಾಣದಲ್ಲಿದೆ. ಅಂತವರ ಬಗ್ಗೆ ಲೇಖಕರು ಮಾಹಿತಿಯನ್ನು ಒದಗಿಸಿದ್ದಾರೆ. ಅಂತಹ ನೆಲದಲ್ಲಿ ಸಾಹಿತ್ಯ ದಿಗ್ಗಜ ದು. ನಿಂ. ಬೆಳಗಲಿಯವರು ವಿದ್ಯಾರ್ಥಿ ದೆಸೆಯಿಂದಲೇ ಯಾವ ರೀತಿಯಿಂದ ತಮ್ಮ ಸೇವೆಯನ್ನು ನೀಡಿದ್ದಾರೆಂಬುದನ್ನು

ಇಲ್ಲಿ ತಿಳಿಯಬಹುದು. ಬೆಳಗಲಿ ಯವರ ಮನೆತನದ ಸಂಪೂರ್ಣ ಮಾಹಿತಿಯನ್ನು ಹಾಗೂ ಅವರ ಬಾಲ್ಯ ಜೀವನವನ್ನು, ವಿದ್ಯಾಭ್ಯಾಸವನ್ನು ಕುರಿತು ಪರಿಪೂರ್ಣವಾದ ಮಾಹಿತಿಯನ್ನು ಕಲೆಹಾಕಿದ್ದಾರೆ. ಬೆಳಗಲಿಯವರ ಜೀವನ ಎಷ್ಟೊಂದು ಪರಿಪೂರ್ಣತೆಯಿಂದ ಕೂಡಿತ್ತು ಎಂಬುದಕ್ಕೆ ಲೇಖಕರು ಸರ್ವಜ್ಞನ ವಚನದ ಸಾಲುಗಳ ಮೂಲಕ ಓದುಗರಿಗೆ ತಿಳಿಸಿದ್ದಾರೆ. ಅವರ ಜೀವನವು ಎಷ್ಟೊಂದು ಆನಂದಭರಿತವಾಗಿತ್ತೆಂದರೆ.

"ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನರಿವಾ ಸತಿಯಾಗಿ! ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ!!"

ಎನ್ನುವಂತೆ ಅವರ ಬಾಳನೌಕೆ ಸುಗಮವಾಗಿ ಸಂತೋಷಮಯವಾಗಿ ಸಾಗಿತ್ತು ಎಂಬುದನ್ನು ಈ ಅಧ್ಯಾಯದಲ್ಲಿ ದು. ನಿಂ. ಬೆಳಗಲಿಯವರ ಬಾಳನೌಕೆಯ ಬಗೆಗೆ ಲೇಖಕರು ಸಮರ್ಪಿಸಿದ್ದಾರೆ.

ಅಧ್ಯಾಯ ಮೂರರಲ್ಲಿ ದು. ನಿಂ. ಬೆಳಗಲಿಯವರ ಸಣ್ಣ ಕಥೆಗಳ ಬಗೆಗೆ ನಿರೂಪಿಸಿದ್ದಾರೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಓದುವ ಹೃದಯಗಳಿಗೆ ತಟ್ಟನೆ ಮನಸ್ಸಿಗೆ ನಾಟುವಂತ ಸುಂದರವಾದ ಮೌಲ್ಯಯುತವಾದ ಕಥೆಗಳನ್ನು ರಚಿಸುವದರಲ್ಲಿ ಇವರು ಸಿದ್ದ ಹಸ್ತರು ಎಂಬುದನ್ನು ತಿಳಿಸಿದ್ದಾರೆ. ಅವರ ಕಥಾನಕಥೆ ಮುನ್ನುಡಿಗಳನ್ನು ಈ ಕೃತಿಯಲ್ಲಿ ಅರಳಿಸಿ ಓದುಗರ ಮನಸ್ಸಿಗೆ ಮತ್ತಷ್ಟು ಖುಷಿಕೋಡುವಂತೆ ಮಾಡಿದ್ದಾರೆ.

ಅಧ್ಯಾಯ ನಾಲ್ಕರಲ್ಲಿ ದು. ನಿಂ. ಬೆಳಗಲಿಯವರು ವೈವಿಧ್ಯಮಯ ವಸ್ತುವಿನೊಂದಿಗೆ ವಿಸ್ತಾರವಾಗಿ ಪ್ರವಹಿಸುತ್ತಿರುವ ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಅಪಾರವಾದ ಕೊಡುಗೆ ಸಲ್ಲಿಸಿದ್ದಾರೆಂಬುದನ್ನು ತಿಳಿಯಬಹುದು. ಬೆಳಗಲಿಯವರದು ಅನೇಕ ಮೌಲ್ಯಯುತವಾದ ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳೆಲ್ಲವನ್ನು ಲೇಖಕರು ಸಂಕ್ಷಿಪ್ತವಾಗಿ ವಿವರಣೆಯನ್ನು ಇಲ್ಲಿ ನೀಡಿದ್ದಾರೆ.

ಒಟ್ಟಾರೆಯಾಗಿ ಈ ಗ್ರಂಥವನ್ನು ತಿರುಚಿ ನೋಡಿದಾಗ ದು. ನಿಂ. ಬೆಳಗಲಿಯವರ ಬಾಲ್ಯ ಜೀವನ ಯಾವ ರೀತಿಯಿತ್ತು ಹಾಗೂ ವೃತ್ತಿ ಜೀವನವನ್ನು ಹೇಗೆ ಕಳೆದರು. ಅವರ ಸಾಹಿತ್ಯ ಕೃಷಿಯನ್ನು ಯಾವ ಯಾವ ಆಯಾಮಗಳಿಂದ ಮಾಡಿದರು ಎಂಬುದರ ಬಗ್ಗೆ ಪರಿಪೂರ್ಣವಾದ ಮಾಹಿತಿಯನ್ನು ಡಾ. ಎಸ್. ಬಿ. ಮಟೋಳಿ ಅವರು ಈ ಕೃತಿಯಿಂದ ತಿಳಿಯುತ್ತದೆ.[೧]

---

೧. ದು. ನಿಂ. ಬೆಳಗಲಿ ಬದುಕು-ಬರಹ ಒಂದು ಅಧ್ಯಯನ ಲೇಖಕರು ಡಾ. ಎಸ್. ಬಿ. ಮಟೋಳಿ ೨೦೦೭ ರಲ್ಲಿ ವಿಮೋಚನಾ ಸಂಘ ಅಥಣಿ.

## ೨.೭) ಬಸವಪ್ರಭು :

ಡಾ. ಎಂ. ಎಂ. ಕಲಬುರ್ಗಿಯವರು ರಚಿಸಿರುವ "ಬಸವಪ್ರಭು" ಎಂಬ ಗ್ರಂಥವನ್ನು ೨೦೦೭ ರಲ್ಲಿ ವಿಮೋಚನಾ ಸಂಘ ಅಥಣಿಯವರು ಕುಸುಮ ಕೃತಿಯನ್ನು ಲೋಕಾರ್ಪಣೆ ಮಾಡಿದ್ದಾರೆ.

ಶ್ರೀ ಬಿ. ಎಲ್. ಪಾಟೀಲರವರ ಆತ್ಮ ಚರಿತ್ರೆಯು ತುಂಬಾ ಮೌಲ್ಯಯುತವಾದುದು. ಅವರ ಬಾಲ್ಯ ವ್ಯವಸ್ಥೆಯನ್ನು ಹಿಡಿದು ಅರವತ್ತು ವರ್ಷಗಳ ಸಾರ್ಥಕ ಸೇವೆಯನ್ನು ಕುರಿತು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ೨೨ ಡಿಸೆಂಬರ ೧೯೪೬ ರಲ್ಲಿ ಕೊಲ್ಲಾಪೂರ ಜಿಲ್ಲೆಯ ಶಿರೋಳ ತಾಲೂಕಿನ ಟಾಕವಡೆ ಗ್ರಾಮದಲ್ಲಿ ಜನಿಸಿದರು. ಇವರ ತಾಯಿ ಸೇವಂತಿಬಾಯಿ ತಂದೆ ಲಖುಮಗೌಡ ಅವರ ಉದರದಿ ಜನಿಸಿದ ಮೇದಾವಿಯೇ ಶ್ರೀ ಬಿ.ಎಲ್. ಪಾಟೀಲರವರು. ಶ್ರೀಯುತರು ತಮ್ಮ ಆತ್ಮಾವಲೋಕನ ಮಾಡುವ ಪರಿಯು ತುಂಬಾ ಮನಸ್ಸಿಗೆ ನಾಟುತ್ತದೆ. ನಾನೇನು ಐತಿಹಾಸಿಕ ಪ್ರಸಿದ್ಧ ವ್ಯಕ್ತಿಯಲ್ಲ, ಮರಳುಗಾಡಿನಲ್ಲಿ ಹೆಜ್ಜೆ ಮೂಡಿಸಿದವನು ಅಲ್ಲ ಎಂಬ ಅರಿವು ನನಗಿದೆ. ಆದರೆ ಹುಟ್ಟಿದ್ದು ಒಂದು ಐತಿಹಾಸಿಕ ದಾಖಲೆಯಲ್ಲವೆ? ನಾನು ೬೦ ವರ್ಷದ ಅಂಚಿನಲ್ಲಿ ಬಂದಾಗ ಅರವತ್ತು ವಸಂತಗಳುದ್ದಕ್ಕು ಕಂಡ ಅನುಭವ ಕ್ಷಣಕ್ಷಣಕ್ಕೂ ಹೊಸದು. ಬಾಲ್ಯ ಹರೆಯ ಪ್ರೌಢಾವ್ಯಸ್ಥೆ ಹೀಗೆ ಪ್ರತಿಯೊಂದು ಹಂತದಲ್ಲಿ ಗಳಿಸಿದ ಅನುಭವ ಅಪಾರವಾದುದು. ಇಂತಹ ಅವರ ಮಾತುಗಳನ್ನು ಕೇಳಿದಾಗ ಏನೋ ಅವರಲ್ಲಿ ದಿವ್ಯವಾದ ಶಕ್ತಿ ಅಡಗಿದೆ ಎಂಬುದು ತಿಳಿಯುತ್ತದೆ. ಅವರು ಆಡುವ ನುಡಿಯು ಸುಮಧುರವಾದುದು ನುಡಿಯಂತೆ ಹೃದಯವು ಅಷ್ಟೇ ಮೃದುವಾದುದು ಎಂಬ ಅರಿವು ನಮಗಾಗುತ್ತದೆ. ಅಂತಹ ಸರಳ ಬಾಲ್ಯ ಜೀವನ ಸಾಗಿಸಿದವರು ದಣಿ. ಶಾಲಾ ಹಂತದಲ್ಲಿಯೇ ನಾಯಕತ್ವದ ಗುಣವನ್ನು ಮೈಗುಡಿಸಿಕೊಂಡವರು ಅವರ ಪ್ರತಿಯೊಂದು ಕಾಯಕದಲ್ಲಿ ಧನ್ಯತಾಭಾವವನ್ನು ಕಾಣುತ್ತಿದ್ದರು. ವಿದ್ಯಾರ್ಥಿ ಜೀವನವನ್ನು ಮುಗಿಸಿ ವಕೀಲ ವೃತ್ತಿಯನ್ನು ಪ್ರಾರಂಭಿಸಿ ಒಬ್ಬ ಶ್ರೇಷ್ಠ ವಕೀಲನಾಗಿ ಸಮಾಜ ಸೇವೆಯನ್ನು ಮಾಡಿದವರು.

ಶ್ರೀಯುತ ಬಿ. ಎಲ್. ಪಾಟೀಲವರು ೧೯೮೪ ರಲ್ಲಿ ತನ್ನ ಆತ್ಮೀಯರ ಸಹಕಾರದಿಂದ ಕೆ.ಎಲ್.ಇ. ಸಂಸ್ಥೆಯ ಉಪಾಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸಿದ್ದಾರೆಂಬುದನ್ನು ತಿಳಿಬಹುದು. ಅವರ ಜೀವನದಲ್ಲಿ ಅನೇಕ ಅಘಾತಕಾರ ಘಟನೆಗಳು ನಡೆದುಹೋದವು ಎಂಬುದನ್ನು ಅವರು ತಮ್ಮ ಅಳಲನ್ನು ಈ ಗ್ರಂಥದಲ್ಲಿ ಬಿಚ್ಚಿಟ್ಟಿದ್ದಾರೆ. ಪಾಟೀಲವರು ತಮ್ಮ ಜೀವನದಲ್ಲಿ ಮಹತ್ವಪೂರ್ಣವಾದ ಹೆಜ್ಜೆಯಿಟ್ಟ ಬಗೆಗೆ ಮನದಾಳದ ಮಾತುಗಳನ್ನು ಆಡಿದ್ದಾರೆ. ಅವರಿಗೆ ಅವಕಾಶಗಳ ಅಹ್ವಾನ ಮಾಡುವ ಛಲವಿತ್ತು. ಇದೇ ವೇಳೆಗೆ ಅಥಣಿ ತಾಲೂಕಿನಲ್ಲಿ ಅನೇಕ ಪ್ರಜ್ವಲಿತ ಸಮಸ್ಯೆಗಳು ಕುರುಡಾಗಿ ಕುಣಿಯುತ್ತಿದ್ದವು ಈ ವೇಳೆಗೆ ಸರಿಯಾಗಿ ಕೆ.ಎಲ್.ಇ. ಶಿವಯೋಗಿ ಮುರುಘೇಂದ್ರ ಸ್ವಾಮಿಜಿ ಕಾಲೇಜಿನಲ್ಲಿ ಸಮಾಜಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿದ್ದ ಶ್ರೀ ಶಂಕರ ಜೋಗನ್ ಅಥಣಿ ತಾಲೂಕಿನಲ್ಲಿದ್ದ ದೇವದಾಸಿ ಸಮಸ್ಯೆಗಳ ಬಗ್ಗೆ ಆಳವಾಗಿ ಅಧ್ಯಯನ

ಮಾಡಲು ವಿಧ್ಯುಕ್ತರಾಗಿದ್ದರು. ತಮ್ಮ ಪಿ.ಎಚ್.ಡಿ. ಅಧ್ಯಯನದ ಅಂಗವಾಗಿ ಅಥಣಿಯ ಅನೇಕ ಪ್ರಜ್ಞಾವಂತರಲ್ಲಿ ಮತ್ತು ದಲಿತರಲ್ಲಿ ವೈಚಾರಕ ಕ್ರಾಂತಿಯನ್ನುಂಟು ಮಾಡುವಲ್ಲಿ ಅದು ಸಫಲವಾಯಿತು. ಅದರ ಫಲವಾಗಿಯೇ "ವಿಮೋಚನಾ ದೇವದಾಸಿ ಪುನರ್ವಸತಿ ಸಂಘ" ರೂಪಗೊಂಡು ಅದ್ಭುತ ಕ್ರಾಂತಿಯ ಬೆಳಕು ಮೂಡಿತು. ಶ್ರೀಯುತರು ೧೯೮೫ ರಲ್ಲಿ ಯಾವ ಪ್ರೇರಣೆಯಿಂದ ಸಂಸ್ಥೆಯನ್ನು ಸ್ಥಾಪನೆ ಮಾಡಿದೆ ಎಂಬುದನ್ನು ತಿಳಿಸಿದ್ದಾರೆ.

ಶ್ರೀ ಬಿ. ಎಲ್. ಪಾಟೀಲವರು ಸಲ್ಲಿಸಿದ ಸೇವೆಯನ್ನು ಆದರಿಸಿ ಅವರಿಗೆ "ಸಮಾಜ ಸೇವೆ ಧುರಂಧರ" ಪ್ರಶಸ್ತಿ ಇಂಗ್ಲೆಂಡ ನಗರದಲ್ಲಿ "ಬಸವ ತತ್ವ" ಪ್ರಸಾರ ಶಾಖೆ ಸ್ಥಾಪಿಸಿ ಮರಳಿ ಬಂದಾಗ ಅಪ್ಪಾಸಾಬ ಅವಟಿಯವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ವಿಕಾಸ ಸಂಘ ಅಥಣಿ ಹಾಗೂ ನಾಗರೀಕರ ಪರವಾಗಿ ಸಾರ್ವಜನಿಕವಾಗಿ ಸನ್ಮಾನ "ರೈತ ಬಂಧು" ಪ್ರಶಸ್ತಿ, "ಸಮಾಜ ಶ್ರೀ" ಪ್ರಶಸ್ತಿ, "ಬಸವಗುರು ಕಾರುಣ್ಯ" ಪ್ರಶಸ್ತಿ, "ಅನಾಥ ಬಂಧು" ಪ್ರಶಸ್ತಿ, 'ರಾಷ್ಟ್ರ' ಪ್ರಶಸ್ತಿ, "ಶ್ರೀ ವಿಶ್ವೇಶ್ವರಯ್ಯ ಇಂಜಿನಿಯರ್ಸ ಡಾಯಿರಿ" ಪ್ರಶಸ್ತಿ, "ವಾಮನ-ಸುಶೀಲರಾವ" ಪ್ರಶಸ್ತಿ, "ರಾಮ ಮನೀಹರ ಲೋಹಿಯಾ" ಪ್ರಶಸ್ತಿ, "ಹಳಕಟ್ಟಿ" ಪ್ರಶಸ್ತಿ, ಸಮಾಜ ಸೇವಾರತ್ನ" ಪ್ರಶಸ್ತಿ ಹೀಗೆ ಅವರ ಸೇವಾ ತಾತ್ಪರತೆಯನ್ನು ಗುರುತಿಸಿ ಪ್ರಶಸ್ತಿಗಳ ಹಾಗೂ ಸನ್ಮಾನಗಳ ಮಹಾಪುರವೇ ಅವರಿಗೆ ಹರಿದು ಬಂದಿದೆ.

ಶ್ರೀಯುತರನ್ನು ಸಮೀಪದಿಂದ ನೋಡಿದ ಅನೇಕ ನಾಡಿನ ದಿಗ್ಗಜರು ಅವರನ್ನು ಕುರಿತು ಅಭಿನಂದನಾ ಗ್ರಂಥಗಳನ್ನು ರಚಿಸಿದ್ದಾರೆ. ಯಾಕೆಂದರೆ ಸಮಾಜದಲ್ಲಿನ ಮೌಢ್ಯತೆಯನ್ನು ಮತ್ತು ಕತ್ತಲೆಯನ್ನು ಹೋಗಲಾಡಿಸಲು ಹಗಲಿರುಳು ದುಡಿದ ಮೇದಾವಿ ಪುರುಷ ಶ್ರೀ ಬಿ. ಎಲ್. ಪಾಟೀಲರವರು.

ಬಿ. ಎಲ್. ಪಾಟೀಲವರ ಆತ್ಮ ಚರೀತ್ರೆಯನ್ನು ಕುರಿತು ರಚನೆಯಾದ ಈ ಗ್ರಂಥವು ತುಂಬಾ ಮೌಲ್ಯಯುತವಾಗಿದೆ. ಕೃತಿಯ ರಚನೆಯಲ್ಲಿ ಅಗತ್ಯವಾದ ಸ್ಥಳಗಳಲ್ಲಿ ಚಿತ್ರಗಳನ್ನು ಸೇರಿಸಿ ಗ್ರಂಥದ ಸೋಬಗನ್ನು ಹೆಚ್ಚಿಸಿದ್ದಾರೆ. ಇಂತಹ ಕುಸುಮ ಕೃತಿಯು ಓದುಗರ ಕೈಸೇರಿರುವದು ಪುಣ್ಯದ ಫಲವೆಂದು ಹೇಳಬಹುದು. ಯಾಕೆಂದರೆ ಪ್ರತಿಯೊಬ್ಬರು ಶ್ರೀಯುತರಂತಹ ಆದರ್ಶ ತತ್ವಗಳನ್ನು ಅಳವಡಿಸಿಕೊಂಡು ಜೀವನ ಸಾಗಿಸಿದರೆ ಸಮಾಜದಲ್ಲಿ ಅನಿಷ್ಠಗಳೆಂಬುದೇ ಇರುವದಿಲ್ಲ ಈ ನಿಟ್ಟಿನಲ್ಲಿ ಈ ಗ್ರಂಥವು ಮಹತ್ವದಾಗಿದೆ.[೧]

---

೧. "ಬಸವಪ್ರಭು" (ಆತ್ಮ ಚರೀತ್ರ) ಪ್ರಧಾನ ಸಂಪಾದಕರು ಡಾ. ಎಂ.ಎಂ.ಕಲಬುರ್ಗಿ ೨೦೦೭ ರಲ್ಲಿ ವಿಮೊಚನಾ ಸಂಘ ಅಥಣಿ.

## ೨.೮) ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು :

ಡಾ॥ ಸರಜೂ ಕಾಟ್ಕರರವರು ರಚಿಸಿದ "ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು" ಇಲ್ಲಿ ಕಂಡುಬರುವ ಕವಿತೆಗಳು ತುಂಬಾ ಮೌಲ್ಯಯುತವಾದವುಗಳಾಗಿವೆ. ಅವರು ತಮ್ಮ ಮನಸ್ಸಿನೊಂದಿಗೆ ಯಾವ ರೀತಿಯಲ್ಲಿ ಪಿಸುಧ್ವನಿಯನ್ನು ಹೊರಹಾಕಿದರು ಎಂಬುದನ್ನು ಅರಿಯಬಹುದು. ವಾಜಪೇಯಿಯವರು ರಾಜಕೀಯ ವೃತ್ತಿಯ ಜೀವನದ ಜೊತೆಯಲ್ಲಿಯೇ ಎಂತಹ ಮಾರ್ಮಿಕವಾದ ಕವಿತೆಗಳನ್ನು ರಚನೆಯನ್ನು ಮಾಡುತ್ತಿದ್ದರು ಎಂಬುದನ್ನು ಸರಜೂ ಕಾಟ್ಕರ ರವರು ತಮ್ಮದೇ ಆದ ರೀತಿಯಲ್ಲಿ ಕವಿತೆಯ ಸಾಲುಗಳ ಮೂಲಕ ಚಿತ್ರಿಸಿದ್ದಾರೆ.

ಸೋಲು, ಗೆಲುವುಗಳನ್ನು ಆಸೆ, ಆಕ್ಷಾಂಕ್ಷೆಗಳನ್ನು ತಮ್ಮ ವ್ಯಥೆಯನ್ನು ಅತ್ಯಂತ ಸರಳವಾಗಿ ಜನರ ಮುಂದೆ ನೀಡಲು ಇಚ್ಛೆಪಡುತ್ತಾರೆ. ಈ ಅಂಶಗಳನ್ನು ಅವರ ಅಂತರ ಪಿಸುಮಾತುಗಳು ಯಾವ ರೀತಿಯಲ್ಲಿ ಹೊರಹಾಕುತ್ತಿದ್ದರು ಎಂಬುದನ್ನು "ತಿರುವಿನಲ್ಲಿ" ಎಂಬ ಕವಿತೆಯ ಚರಣಗಳನ್ನು ನೋಡಬಹುದು.

"ನನ್ನ ಎದುರಿಗಿರುವ ಸಭೆಯನ್ನು ನನ್ನ
ಮಾತುಗಳಿಂದ ನಾನು ಗೆಲ್ಲುತ್ತೇನೆ
ಆದರೆ ಸ್ವಂತ ನಾನೇ ನನ್ನ ಪ್ರಶ್ನೆಗಳಿಗೆ
ಉತ್ತರ ನೀಡಲಾಗುವದಿಲ್ಲ."
("ತಿರುವಿನಲ್ಲಿ" ೧೯ ನೇ ಚರಣದಲ್ಲಿ ಪುಟ-೪೭)

ಇಂತಹ ಮೌಲ್ಯಯುತ ಪ್ರಶ್ನೆಗಳನ್ನು ವಾಜಪೇಯಿಯವರು ತಾವೇ ಹಾಕಿಕೊಳ್ಳುತ್ತಿದ್ದರು. ಆದರೆ ಕೆಲವೊಂದು ಪ್ರಶ್ನೆಗಳಿಗೆ ಉತ್ತರ ಸಿಗದಿದ್ದಾಗ ಬೇಸರದಿಂದ ಜೀವನದ ಸಂಕುಚಿತತೆಯಲ್ಲಿ ಮುನ್ನಡೆಯುತ್ತಿದ್ದರು. ಹೀಗೆ ಬೇರೆ ಬೇರೆ ವೈವಿದ್ಯಮಯವಾದ ಕವಿತೆಗಳನ್ನು ಈ ಸಂಕಲನದಲ್ಲಿ ಚಿತ್ರಿಸಲಾಗಿದೆ.

ವಾಜಪೇಯಿ ಅವರ ಕಲ್ಪನೆಯಲ್ಲಿ ಮಾನವಿಯತೆಗಿರುವ ಸ್ಥಾನ ಬೇರೆ ಯಾವ ಮೌಲ್ಯಕ್ಕೂ ಇಲ್ಲ ಎಂಬುದನ್ನು "ಗುರುತು" ಎಂಬ ಕವಿತೆಯ ಪಾದಗಳಲ್ಲಿ ಕಾಣಬಹುದು.

"ಮನುಷ್ಯ ಶ್ರೇಷ್ಠ ಅಥವಾ ಕನಿಷ್ಠ
ಅಥವಾ ಸಣ್ಣವ ಅಥವಾ ದೊಡ್ಡವ ಇರುವದಿಲ್ಲ
ಮನುಷ್ಯ ಕೇವಲ ಮನುಷ್ಯನಾಗಿರುತ್ತಾನೆ."
("ಗುರುತು" ೫ ಚರಣದಲ್ಲಿ ಪುಟ-೩೨)

ಜಗತ್ತಿನಲ್ಲಿ ಯಾರು ಶ್ರೇಷ್ಠರಲ್ಲ ಎಂಬುದನ್ನು ಈ ಕವಿತೆಯ ಸಾಲುಗಳ ಮೂಲಕ ತಿಳಿಯಬಹುದು ಕೇವಲ ಮಾನವೀಯತೆ ಅತ್ಯಂತ ಶ್ರೇಷ್ಠವಾದುದು ಎಂಬುದನ್ನು ನಾವು ಇಲ್ಲಿ ಅರಿಯಬಹುದಾಗಿದೆ. ಈ ಎಲ್ಲ ಕವಿತೆಗಳನ್ನು ಓರೆ ಹಚ್ಚಿ ನೋಡಿದಾಗ ತಿಳಿಯುವದೆನೆಂದರೆ ಸ್ಪೂರ್ತಿ, ಮಾನವೀಯತೆಗಳು ಪ್ರತಿಯೊಬ್ಬ ಮನುಷ್ಯನಲ್ಲಿ ಅವಶ್ಯವಾಗಿ ಬೇಕಾಗುತ್ತವೆ ಎಂಬುದನ್ನು ನಾವು ಪ್ರತಿಯೊಂದು ಕವಿತೆಯ ಅಂಶದಿಂದ ಅರಿವಾಗುತ್ತದೆ. ತಾವು ರಾಜಕೀಯ ವೃತ್ತಿಯಲ್ಲಿದ್ದುಕೊಂಡೆ ಅಲ್ಲಿ ಎಂತಹ ಮರ್ಮಗಳು ಅಡಗಿವೆ ಎಂಬುದನ್ನು ಈ ಎಲ್ಲ ಕವಿತೆಯ ಮೂಲಕ ನಮ್ಮ ಅರಿವೆಗೆ ಬರುತ್ತದೆ.[೧]

## ೨.೯) ಸಂಚಾರಿ :

ಖಲೀಲ ಜಿಬ್ರಾನ ಅವರು ಬರೆದಿರುವ ಇಂಗ್ಲೀಷ ಕೃತಿಯನ್ನು ವಿಮೋಚನಾ ಪ್ರಕಾಶನ ಅಥಣಿಯವರು ತಮ್ಮ ೪೫ ನೇ ಪ್ರಕಟನೆಯಾಗಿ ಬಿ. ಎ. ಸನದಿಯವರು ಕನ್ನಡ ಅನುವಾದದ ಮೂಲಕ ಓದುಗರಿಗೆ ತಲುಪಿಸುವಲ್ಲಿ ಯಶಸ್ವಿಯಾಗಿದ್ದಾರೆ. ಸಂಚಾರಿ ಕೃತಿಯು ಹೊಸತನವನ್ನು ಹೊತ್ತು ಕನ್ನಡ ಸಾಹಿತ್ಯದ ಸಾಗರದಲ್ಲಿ ಹರಿದು ಬಂದಿದೆ. ನಾಗರೀಕತೆಯು ಬೆಳೆದಂತೆಲ್ಲ ವೈಜ್ಞಾನಿಕತೆಯು ಜನುಮದಲ್ಲಿ ಪಸರಿಸಿದೆ ಜಾಗತೀಕರಣದಿಂದ ಇಡೀ ವಿಶ್ವವು ಸಂಕುಚಿತಗೊಂಡಂತೆ ತೋರುತ್ತದೆ. ಹಿಂದಿನ ಕಾಲಮಾನದಿಂದಲೂ ಬಂದ ಆಚಾರ ವಿಚಾರಗಳು ಕುಸಿಯದಂತೆ ಹಾಗೂ ಮನುಷ್ಯರ ಭಾವನೆಗಳು ಸಂಕುಚಿತವಾಗದಂತೆ ಮಾಡುವಲ್ಲಿ ಈ ಕೃತಿಯು ಪ್ರೇರಣೆ ನೀಡುವಂತ, ಮೌಲ್ಯಯುತ ದೃಷ್ಟಾಂತ ಕಥೆಗಳನ್ನು ಹೊಂದಿದೆ.

"ಸಂಚಾರಿ" ಕೃತಿಯು ಸಮಾಜದಲ್ಲಿನ ಜನರ ಮನೋಭಾವನೆಗಳನ್ನು ಅರಿತುಕೊಂಡಂತೆ ತೋರುತ್ತದೆ ಈ ಹೊತ್ತಿಗೆಯಲ್ಲಿ ಒಟ್ಟು ಐವತ್ತೆರಡು ಸುಂದರವಾದ ದೃಷ್ಟಾಂತಗಳನ್ನು ಹೊತ್ತಿರುವ ಮೌಲ್ವಿಕ ಕಥೆಗಳನ್ನು ಒಳಗೊಂಡಿದೆ. "ಪ್ರೇಮಗೀತೆ" ಎಂಬ ದೃಷ್ಟಾಂತ ಕಥೆಯಲ್ಲಿ ಸುಂದರವಾದ ಪ್ರೇಮಗೀತೆಯನ್ನು ಬರೆದು ತನ್ನ ಆತ್ಮೀಯರಿಗೆಲ್ಲ ಅದನ್ನು ಓದಲು ಕೋಡುತ್ತಾನೆ. ಆಕಸಾಕವಾಗಿ ಬೇಟಿಯಾದ ಓರ್ವ ಯುವತಿಗೂ ಅದರ ಒಂದು ಪ್ರತಿಯು ಹೋಯಿತು ಅದನ್ನು ಆಕೆಯು ಓದಿದಳು ತಕ್ಷಣ ಅವಳು ಆ ಕವಿತೆಯನ್ನು ಬರೆದ ಕವಿಗೆ ಮರಳಿ ಉತ್ತರವನ್ನು ಬರೆಯುತ್ತಾಳೆ. ನೀವು ನನ್ನ ಕುರಿತಾಗಿ ಬರೆದ ಪ್ರೇಮಗೀತೆಯಿಂದ ನನ್ನ ಮನಸ್ಸು ಹೂವಾಗಿದೆ. ನಾನು ತುಂಬಾ ಪ್ರಭಾವಿತಳಾಗಿದ್ದೇನೆ ನೀವು ನಿಮ್ಮ ಮನೆಯವರನ್ನು ಕರೆದುಕೊಂಡು ಬಂದು ನನ್ನ ತಂದೆ–ತಾಯಿಯರ ಕಡೆ ಬಂದು ಮಾತನಾಡಿರಿ. ಆದಷ್ಟು ಬೇಗನೆ ನಿಶ್ಚಯ ಕಾರ್ಯವನ್ನು ಮುಗಿಸಿಬಿಡಿ ಎಂದು ಉತ್ತರಿಸಿದಳು.

---

೧. "ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು" ಲೇಖಕರು ಡಾ॥ ಸರಜೂ ಕಾಟ್ಕರ್ ೧೯೯೯ ರಲ್ಲಿ ವಿಮೋಚನಾ ಸಂಘ ಅಥಣಿ.

ಆಗ ಕವಿಯು ಅದಕ್ಕೆ ಮರಳಿ ಉತ್ತರವನ್ನು ಬರೆದು ಅದು ಕೇವಲ ಕವಿಯ ಕಲ್ಪನೆ ಮಾತ್ರ. ಅದನ್ನು ನೀವು ತಪ್ಪಾಗಿ ತಿಳಿಯಬಾರದು ಎಂದು ಮರಳಿ ಉತ್ತರಿಸುತ್ತಾನೆ. ಆಗ ಅವಳು ನೀನು ಒಬ್ಬ ಸುಳ್ಳುಗಾರ ಮೋಸಗಾರ ನಾನು ಈ ಹೊತ್ತಿನಿಂದ ಲೋಕದಲ್ಲಿದ್ದ ಕವಿಗಳನ್ನು ನನ್ನ ಕೊನೆಯ ಉಸಿರು ಇರುವವರೆಗೂ ದ್ವೇಷಸುತ್ತೇನೆಂದು ಮರಳಿ ಉತ್ತರಿಸುತ್ತಾಳೆ ಇಂತಹ ಮೌಲ್ವಿಕ ದೃಷ್ಟಾಂತ ಕಥೆಗಳನ್ನು ಈ ಕೃತಿಯ ಯುದ್ದಕ್ಕೂ ಚಾಪು ಚೆಲ್ಲಿದ್ದಾರೆ ಎಂಬುದನ್ನು ಅರಿಯಬಹುದು.[೧]

೧. "ಸಂಚಾರಿ" ಲೇಖಕರು ಬಿ. ಎ. ಸನದಿ ವಿಮೋಚನಾ ಸಂಘ ಅಥಣಿಯವರ ೪೫ ನೇ ಪ್ರಕಟಣೆ ೨೦೦೨ ರಲ್ಲಿ ಪುಟ ೫ ರಲ್ಲಿಯ ಪ್ರೇಮಗೀತೆಯ ಕಥಾ ದೃಷ್ಟಾಂತ.

## ಅಧ್ಯಾಯ – ೬ :

# ಇತರ ಸಾಹಿತ್ಯ

| | | | |
|---|---|---|---|
| ೬.೧) | ವಿಮೋಚನಾ ಸಂಘ ಅಥಣಿ | – ಇತಿಹಾಸ | ಶ್ರೀ ವ್ಹಿ. ಎಸ್. ಮನವಾಡೆ |
| ೬.೨) | ಇದು ಭಾರತ | – ಸಾಂಸ್ಕೃತಿಕ | ಶ್ರೀ ಸುರೇಶ ವೆಂ. ಕುಲಕರ್ಣಿ |
| ೬.೩) | ಅಥಣಿ ತಾಲೂಕು: ಸಮಗ್ರ ದರ್ಶನ | – ಸಮಗ್ರದರ್ಶನ | ಡಾ. ವ್ಹಿ. ಎಸ್. ಮಾಳಿ |
| ೬.೪) | ಹಿಂದೂ ಧರ್ಮ | – ಅನುವಾದಿತ ಕೃತಿ | ಶ್ರೀ ಎಸ್. ಕೆ. ಕುಲಕರ್ಣಿ |
| ೬.೫) | ಬದುಕಲು ಇದೊಂದೇ ದಾರಿ | – ಅನುಭಾವ | ಅನು: ಶೇಷಗಿರಿ ಹಾರನಹಳ್ಳಿ |
| ೬.೬) | ಎದೆಹಾಲು | – ತ್ರಿಪತಿಗಳು | ಶ್ರೀ ಈಶ್ವರ ಕಾಪಸೆ |
| ೬.೭) | ಕಾಪಾಡು ಕೂಡಲ ಸಂಗಮದೇವಾ | – ನಗೆಬರಹ | ಶ್ರೀ ದು. ನಿಂ. ಬೆಳಗಲಿ |
| ೬.೮) | ಸೂರ್ಯ ನಮಸ್ಕಾರ | – ಯೋಗಶಿಕ್ಷಣ | ಶ್ರೀ ಈಶ್ವರ ಕಾಪಸೆ |
| ೬.೯) | ಶರಣ ಪ್ರಕಾಶ | – ಲೇಖನ ಸಂಕಲನ | ಶ್ರೀ ವ್ಹಿ. ಎಸ್. ಮನವಾಡೆ |
| ೬.೧೦) | ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ | – ಕಿರು ಪ್ರಬಂಧ | ಶ್ರೀ. ಎಸ್. ವಾಯ್. ಹಂಜಿ |
| ೬.೧೧) | ಉದರೋಪನಿಷತ್ | – ಹಗುರ ಬರಹಗಳು | ಶ್ರೀ ಮಲ್ಲಿಕಾರ್ಜುನ ಹುಲಗಬಾಳಿ |
| ೬.೧೨) | ಪ್ರಾಯೋಜನೆ : ಸುಸ್ಥಿರ ಅಭಿವೃದ್ಧಿಯೆಡೆಗೆ | – ಸಮಾಜಕಾರ್ಯ | ಶ್ರೀ ಸುಭಾಷ ಚಿಟಗುಪಕರ |

## ೬.೧) ವಿಮೋಚನಾ ಸಂಘ, ಅಥಣಿ :
## (ಎರಡು ದಶಕಗಳ ಒಂದು ಸಮಗ್ರ ಅವಲೋಕನ)

ಶ್ರೀ ವ್ಹಿ. ಎಸ್. ಮನವಾಡೆ ನಿರ್ದೇಶಕರು ವಿಮೋಚನಾ ಪ್ರಕಾಶನ ಕೃತಿಯನ್ನು ರಚಿಸಿರುವ "ವಿಮೋಚನಾ ಸಂಘ, ಅಥಣಿ"ಯವರು ೨೦೦೭ ರಲ್ಲಿ ತಮ್ಮ ೫೫ ನೇ ಆವೃತ್ತಿಯಾಗಿ ಹೊರತಂದಿದ್ದಾರೆ.

ವಿಮೋಚನಾ ದೇವದಾಸಿ ಪುನರ್ವಸತಿ ಸಂಘ ಅಥಣಿ ೨೫ ವರ್ಷಗಳನ್ನು ಪೂರೈಸುತ್ತಿರುವ ಸಂಘದ ಇತಿಹಾಸದ ಪುಟಗಳು ಮನವಿರೇಳಿಸುವ ಅನುಭವವನ್ನು ನೀಡುತ್ತವೆ. ೧೯೯೧ ರಲ್ಲಿ ರಾಜ್ಯ ಸರಕಾರವು ಮಕ್ಕಳ ಅಭಿವೃದ್ದಿಗಾಗಿ ನೀಡಿದ ಪ್ರಶಸ್ತಿ, ೧೯೯೭ ರಲ್ಲಿ ಕೇಂದ್ರ ಸರಕಾರವು ಸಂಕಟ ಪರಿಸ್ಥಿತಿಯಲ್ಲಿರುವ ಮಕ್ಕಳ ಸೇವೆಗಾಗಿ ನೀಡಿದ ರಾಷ್ಟ್ರ ಪ್ರಶಸ್ತಿ, ೨೦೦೧ ನೇ ವರ್ಷದ ರಾಜ್ಯೋತ್ಸವ ಪ್ರಶಸ್ತಿ, ೧೯೯೮ ರ ಸಂದೇಶ ಪ್ರತಿಷ್ಟಾನ ಪ್ರಶಸ್ತಿಗಳು ಹಾಗೂ ಕೇಂದ್ರ ಸರಕಾರದ ಹಾಗೂ ರಾಜ್ಯ ಸರಕಾರದ ಬಲ ವೈಶಾವೃತ್ತಿ ನಿಯಂತ್ರಣ ಸಮಿತಿಗಳ ಸದಸ್ಯನ್ನಾಗಿ ಸಂಘವು ಆಯ್ದುಕೊಂಡಿತು.

ಇಂತಹ ಅಪೂರ್ವ ಸಾಧನೆಯ ಸಂಸ್ಥೆಯು ಇತಿಹಾಸವನ್ನು ಅದರ ನಿರ್ದೇಶಕರಾಗಿ ಸಂತಸ ಕಂಡ ಅನುಭವದ ಮಾತುಗಳನ್ನು ಸಮಗ್ರ ಚರಿತ್ರೆಯನ್ನು ಶ್ರೀ. ವ್ಹಿ. ಎಸ್. ಮನವಾಡೆಯವರು ವಿವರನಾತ್ಮಕವಾಗಿ ಈ ಕಿರು ಹೊತ್ತಿಗೆಯಲ್ಲಿ ಚಿತ್ರಿಸಿದ್ದಾರೆ.

ವಿಮೋಚನಾ ಸಂಘದ ಹಿನ್ನಲೆ ಯಾವ ರೀತಿಯೆದೆ ಅಲ್ಲಿ ಇಂತಹ ಜಟಿಲ ಸಮಸ್ಯೆಗಳು ಬಂದರು ಎದೆಗುಂದದೆ ಹೇಗೆ ಮುಂದೆ ಸಾಗಿದರು ಎಂಬುದನ್ನು ತಿಳಿಸಿದ್ದಾರೆ. ಸಂಸ್ಥೆಯ ಸ್ಥಾಪನೆಯನ್ನು ಮಾಡಲು ವಿಚಾರ ಸಂಕೀರ್ಣ ಏರ್ಪಡಿಸಿದಾಗ ಅಲ್ಲಿ ಸಿ.ಸಿ.ಎಫ್. ಸಂಸ್ಥೆಯ ರಾಷ್ಟ್ರೀಯ ನಿರ್ದೇಶಕರಾದ ಶ್ರೀ. ಸಿ. ಎಸ್. ಗೋಫೆರ ಯಾವ ರೀತಿಯ ಸಹಾಯ ಹಸ್ತ ನೀಡಿದರು ಎಂಬುದನ್ನು ಇಲ್ಲಿ ತಿಳಿಸಿದ್ದಾರೆ. "ಸಿ.ಸಿ.ಎಫ್. ಪ್ರೊಜೆಕ್ಟ ಎಂದರೇನು?" ಅದರ ಕಾರ್ಯವ್ಯಾಪ್ತಿ ಎಂತದ್ದು ಎಂಬುದನ್ನು ಇದರಲ್ಲಿ ಅರಿಯಬಹುದು.

ಸಮಾಜದ ಹಿಂದುಳಿದ ವರ್ಗಗಳಿಗೆ ಸಹಾಯ ಹಸ್ತ ನೀಡುವದರ ಜೋತೆಗೆ ಸಂಘವು ಶಿಕ್ಷಣ ಕ್ಷೇತ್ರಕ್ಕೆ ಯಾವ ರೀತಿಯಲ್ಲಿ ಮಹತ್ವ ನೀಡಿತು. ದೇವದಾಸಿ ಸಂಪ್ರದಾಯದ ಮೌಢ್ಯತೆಯನ್ನು ತೊಲಗಿಸಿಲು ಯಾವ ಕಾರ್ಯಗಳನ್ನು ಕೈಗೊಂಡಿತು ಎಂಬುದರ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಇದರಲ್ಲಿ ಲೇಖಕರು ಸೇರ ಹಿಡಿದಿದ್ದಾರೆ. ಸಂಸ್ಥೆಯು ಮತ್ತೊಂದು ಹೆಜ್ಜೆಯನ್ನು ಮುಂದಿಟ್ಟು ಮಕ್ಕಳಿಗೆ ವಿಧ್ಯಾಭ್ಯಾಸದ ಅನುಕೂಲತೆಯ ದೃಷ್ಟಿಯಿಂದ ದುಂ. ನಿಂ. ಬೆಳಗಲಿಯವರ ಹೆಸರಿನಲ್ಲಿ ಒಂದು ವೈವಿಧ್ಯಮಯವಾದ ಗ್ರಂಥಾಲಯವನ್ನು ಸ್ಥಾಪನೆಮಾಡಿತು ಎಂಬುದನ್ನು ಮನವರಿಕೆ ಮಾಡಿಕೊಳ್ಳಬಹುದು. ಅಷ್ಟೇ ಅಲ್ಲದೆ ಗ್ರಾಮೀಣ ಜನತೆಯಲ್ಲಿ ವಿಜ್ಞಾನ ಕೇಂದ್ರವನ್ನು ಗ್ರಾಮೀಣ ಭಾಗದಲ್ಲಿ ಸ್ಥಾಪನೆ ಮಾಡಿತು. ಇದರ ಜೋತೆಯಲ್ಲಿಯೇ ಕಿರಿಯ ಮಹಾವಿದ್ಯಾಲಯವನ್ನು ಸಹ ಸ್ಥಾಪಿಸಿ ತನ್ನ ಕಾರ್ಯ ವೈಖರಿಯನ್ನು ಮೆರೆದುದರ ಬಗ್ಗೆ ಈ ಕಿರು ಹೋತ್ತಿಗೆಯಲ್ಲಿ ನಿರೂಪಿಸಿದ್ದಾರೆ.

ವೈಜ್ಞಾನಿಕ ಪ್ರಗತಿಯು ಇಂದು ಆಕಾಶದೆತ್ತರಕ್ಕೆರಿದೆ. ಅದರ ವೇಗವನ್ನ ತಡೆಯಲಾಗದು. ಇದಕ್ಕೆ ಕಾರಣ ಕಂಪ್ಯೂಟರ ಈ ತಂತ್ರಜ್ಞಾನವನ್ನು ಉಪಯೋಗಿಸಲು ಕಲಿಯದಿದ್ದರೆ ಶಿಕ್ಷಣ ಪಡೆದಿದ್ದರೂ ಸಹ ಅವರು ಅನಕ್ಷರಸ್ಥರೆಂದು ತಿಳಿಯುತ್ತಾರೆಂದು ಮನಗಂಡ ಸಂಸ್ಥೆಯು ಗ್ರಾಮೀಣ ಜನತೆಗೆ ಕಂಪ್ಯೂಟರ ಶಿಕ್ಷಣವನ್ನು ನೀಡಬೇಕೆಂದು ವಿಚಾರಿಸಿ "ವಿಮೋಚನಾ ಕಂಪ್ಯೂಟರ ಶಿಕ್ಷಣ ಕೇಂದ್ರ" ವನ್ನು ತೆರೆಯಿತು. ಅದರ ಮೂಲಕ ಗ್ರಾಮೀಣ ಮಕ್ಕಳಿಗೆ ತಂತ್ರಜ್ಞಾನ ಶಿಕ್ಷಣ ಎಂದರೇನು? ಎಂಬುದರ ಬಗ್ಗೆ ಅರಿವನ್ನು ಮೂಡಿಸಿದೆ ಎಂಬುದನ್ನು ಪ್ರಸ್ತಾಪಿಸಿದ್ದಾರೆ. ಹಾಗೆಯೇ "ಗೋಟಲೋಬ ಬಿಯಾಂಕಾ ಮಕ್ಕಳ ಪರ್ಕು" ಎಂದು ಸ್ಥಾಪಿಸಿದ್ದು ಇದರ ಮೂಲಕ ಚಿಕ್ಕ ಮಕ್ಕಳ ಸ್ವಚ್ಚಂದವಾದ ಮನಸ್ಸು ಯಾವ ರೀತಿಯಲ್ಲಿ ವ್ಯಕ್ತಪಡಿಸುತ್ತಾರೆಂಬುದನ್ನು ಹೇಳುವಲ್ಲಿ ಇವರು ಪ್ರಯತ್ನ ಪಟ್ಟಿದ್ದಾರೆ.

ವಿಮೋಚನಾ ಸಂಸ್ಥೆಯ ಕಾರ್ಯ ವಿಶಾಲತೆಯ ಬಗೆಗೆ ತಿಳಿದುಕೊಂಡು ಜರ್ಮನಿಯ 'ಕ್ಯಾಸಿಲ್ ಶಿಕ್ಷಣ ಸಂಸ್ಥೆಯ' ಪ್ರಧಾನ ಕಾರ್ಯದರ್ಶಿಗಳಾದ ಪೂಜ್ಯ ಎಬ್ರಾರ್ಡವಿಲ್ ಎಂಬುವವರು ಸಂಸ್ಥೆಗೆ ಅನೀರಿಕ್ಷಿತವಾಗಿ ಭೆಟಿ ನೀಡಿದರು. ದೇವದಾಸಿ ಸಮಸ್ಯೆಯನ್ನು ಪರಿಹಾರ ಮಾಡಲು ಆರ್ಥಿಕವಾಗಿ

ಸ್ವಾವಲಂಬನೆ ಅತೀ ಅವಶ್ಯವೆಂದು ತಿಳಿದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ವಿಮೋಚನಾ ಸಂಘದ ಸೇವೆಯನ್ನು ಪಡೆಯುತ್ತಿರುವ ಮಕ್ಕಳು ಉನ್ನತ ಶಿಕ್ಷಣ ಪಡೆಯುವ ಬದಲಾಗಿ ಉದ್ಯೋಗ ತರಬೇತಿಯನ್ನು ಪಡೆದು ಸ್ವಯಂ ಉದ್ಯೋಗಿಗಳಾದರೆ ಅವರಿಗೂ ಹಾಗೂ ಅವರ ಕುಟುಂಬಗಳು ಆರ್ಥಿಕವಾಗಿ ಸ್ವಾವಲಂಬನೆಯನ್ನು ಸಾಧಿಸಲು ಸಾಧ್ಯ. ತನ್ಮೂಲಕ ಸಮಾಜಿಕ ಪರಿವರ್ತನೆಗೆ ದಾರಿಯು ಸಹ ಸುಗುಮವಾಗುತ್ತದೆಂದು ಬಾವಿಸಿ ತಮ್ಮ ಚರ್ಚೆಯ ಮೂಲಕ ಈ ಮಕ್ಕಳಿಗಾಗಿ 'ಸ್ವಯಂ ಉದ್ಯೋಗ ತರಬೇತಿ'ಗಾಗಿ ಸಹಾಯ ನೀಡಲು ಮುಂದೆ ಭಂದರು. ಅದರ ಫಲವಾಗಿ "ವಿಮೋಚನಾ ಸ್ವಯಂ ಉದ್ಯೋಗ ತರಬೇತಿ ಕೇಂದ್ರ" ಹುಟ್ಟಿಕೊಂಡಿತು ಎಂಬುದನ್ನು ಈ ಕಿರು ಕೃತಿಯಿಂದ ತಿಳಿಯಬಹುದು. ಈ ಕೇಂದ್ರದಿಂದ ಅನೇಕ ಯುವಕ ಯುವತಿಯರಿಗೆ ತಮ್ಮ ಜೀವನವನ್ನು ಹೇಗೆ ಜವಾಬ್ದಾರಿಯುತವಾಗಿ ಕಳೆಯಬಹುದು ಎಂಬುದರ ಅರಿವನ್ನು ಅವರಲ್ಲಿ ಮೂಡಿಸಿದ್ದಾರೆ. ಅದರ ಜೋತೆಯಲ್ಲಿಯೇ "ವಿಮೋಚನಾ ಸ್ಕೂಲ್ ಆಫ್ ನರ್ಸಿಂಗ್" ವನ್ನು ಪ್ರಾರಂಬಿಸಿ, ವೈಧ್ಯಕೀಯ ಕ್ಷೇತ್ರಗಳಿಗೆ ತಮ್ಮ ಸಂಸ್ಥೆಯ ಮೂಲಕ ದೇಶ ಸೇವೆಗಾಗಿ ನರ್ಸುಗಳನ್ನು ಸೇವೆಗಾಗಿ ನೀಡಿದ್ದಾರೆಂದರೆ ಅಚ್ಚರಿಯೆನಲ್ಲ.

ವಿಮೋಚನಾ ಸಂಘಕ್ಕೆ ಸಿ.ಸಿ.ಎಫ್. ಸಂಸ್ಥೆಯು ಧನಸಹಾಯವನ್ನು ನೀಡುತ್ತಿತ್ತು. ಆದರೆ ಮುಂದೊಂದು ದಿನ ಈ ಸಹಾಯ ನಿಂತು ಹೋಗಬಹುದು ಎಂದು ತಿಳಿದು ಪೂಜ್ಯರಾದ ಮಹಾಂತ ಶಿವಯೋಗಿಗಳು ಸಂಕಲ್ಪಿಸಿ ಶ್ರೀ ಗುರುಬಸವ ಪ್ರಸಾದ ಟ್ರಷ್ಟನ್ನು ತಮ್ಮ ಅಧ್ಯಕ್ಷತೆಯಲ್ಲಿ ೧೯೯೫ ರಲ್ಲಿ ಸ್ಥಾಪಿಸಿದರು. ಅದರ ಮೂಲಕ ಶಾಲಾ ಮಕ್ಕಳಿಗೆ ದಾಸೋಹ ರೂಪದಲ್ಲಿ ಊಟದ ವ್ಯವಸ್ಥೆಯನ್ನು ಕೈಗೊಂಡರು. ಯುವಕರಲ್ಲಿ ಸಾಮಾಜಿಕ ಬದ್ಧತೆಯನ್ನು ಜಾಗೃತವಾಗಿರಿಸುವದಕ್ಕೆ ಹಾಗೂ ಅದನ್ನು ವೃಧ್ದಿಸಲು ಪ್ರೇರಣೆಯ ಸಲುವಾಗಿ ಚಿಂತನೆಗೈದು ಮಂಗಳೂರು ವಿಶ್ವವಿದ್ಯಾಲಯದಲ್ಲಿ ಡಾ॥ ಜೋಗನ್ ಶಂಕರ ಅವರ ಅಪೇಕ್ಷೆಯ ಮೇರೆಗೆ "ವಿಮೋಚನಾ ಗೋಲ್ಡ ಮೆಡಲ್" ಪ್ರತಿಭಾವಂತ ಮಕ್ಕಳಿಗೆ ನೀಡಿ ವಿಮೋಚನಾ ಸದಾ ಪ್ರೇರಣೆ ನೀಡುತ್ತಾ ಬಂದ್ದಿದೆ. ಹಾಗೇಯೇ ಸಾಮಾಜಿಕ ಸೇವೆಗಳಿಂದಲೂ ಸಹ ಸಂಘವು ಹಿಂದೆ ಬಂದಿಲ್ಲಾ. "ವಿಮೋಚನಾ ಎಂಬ್ಯೂಲೆನ್ಸ" ಸೇವೆಯನ್ನು ಜನರಿಗೆ ನೀಡುತ್ತಿದೆ ಎಂಬುದನ್ನು ಲೇಖಕರು ತಿಳಿಸಿದ್ದಾರೆ. ಇಂತಹದರ ಜೋತೆಯಲ್ಲಿ ಇನ್ನೊಂದು ದಿಟ್ಟ ಹೆಜ್ಜೆಯನ್ನಿಡುತ್ತಾ ವಿಮೋಚನಾ ಪ್ರಕಾಶನ ಕಾರ್ಯವನ್ನು ಕೈಗೆತ್ತಿಕೊಂಡು ತನ್ನ ಸಾಧನೆಯನ್ನು ಮೆರೆಯುತ್ತಿದೆಂದು ನಮಗೆ ಅರಿವಾಗುತ್ತದೆ. ಒಟ್ಟಾರೆಯಾಗಿ ಈ ಕಿರು ಹೊತ್ತಿಗೆಯಲ್ಲಿ ವಿಮೋಚನಾ ಸಂಘವು ಯಾವ ಯಾವ ರೀತಿಯಲ್ಲಿ ತನ್ನ ಕಾರ್ಯವನ್ನು ಮಾಡುತ್ತದೆ ಅದರ ವೈಶಿಷ್ಟವೇನು? ಸಾಧನೆ ಏನು? ಎಂಬುದರ ಬಗ್ಗೆ ಸಂಪೂರ್ಣವಾಗಿ ಅಂದರೆ ೧೯೮೫ ರಿಂದ ೨೦೦೬ ರ ವರೆಗೆ ಯಾವ ರೀತಿಯಲ್ಲಿ ದಿಟ್ಟ ಹೆಜ್ಜೆಯನ್ನು ಇಡುತ್ತಾ ಮುಂದೆ ಸಾಗುತ್ತದೆ ಎಂಬುದನ್ನು ಸಂಪೂರ್ಣ ಮಾಹಿತಿಯನ್ನ ಒಳಗೊಂಡ ಕೃತಿ ಇದಾಗಿದೆ ಎಂದು ಮನಹಪೂರ್ವಕವಾಗಿ ಹೇಳಬಹುದು.[೧]

---

೧. "ವಿಮೋಚನಾ ಸಂಘ ಅಥಣಿ" (ಎರಡು ದಶಕಗಳ ಒಂದು ಸಮಗ್ರ ಅವಲೋಕನ)
ಲೇಖಕರು– ಶ್ರೀಯುತ ವ್ಹಿ. ಎಸ್. ಮುವಾಡೆ. ೨೦೦೬ ರಲ್ಲಿ ವಿಮೋಚನಾ ಸಂಘ ಅಥಣಿ.

## ೬.೨) ಇದು ಭಾರತ :

ಶ್ರೀ ಸುರೇಶ ಎಂ. ಕುಲಕರ್ಣಿಯವರು ರಚಿಸಿರುವ "ಇದು ಭಾರತ" ಎಂಬ ಕೃತಿ ಕುಸುಮವನ್ನು ವಿಮೋಚನಾ ಸಂಘ ಅಥಣಿಯವರು ೫೫ ನೇ ಕೃತಿಯಾಗಿ ಪ್ರಕಟಣೆ ಮಾಡಿದ್ದಾರೆ.

ಭಾರತ ದೇಶವನ್ನು ಸ್ಥೂಲವಾಗಿ ವರ್ಣಿಸಿದ ಬಳಿಕ ಅದನ್ನು ಪೂರ್ವ, ಪಶ್ಚಿಮ, ದಕ್ಷಿಣ ಉತ್ತರ ಮಧ್ಯವೆಂದು ವಿಭಾಗಿಸಿ ಈ ವಿಭಾಗಗಳಲ್ಲಿ ಸಮಾವೇಶಗೊಳ್ಳುವ ಒಂದೊಂದು ರಾಜ್ಯವನ್ನು ಹೆಚ್ಚಿನದಾಗಿ ಬಾಹ್ಯದ್ವೀಪಗಳನ್ನು ಶಾಬ್ದಿಕವಾಗಿ ಬಿಡಿಸಿ ಇಟ್ಟ ರೀತಿ ತುಂಬಾ ಸಮರ್ಪಕವೆನಿಸಿದೆ. ಕೇವಲ ವಿವರಣೆಯಲ್ಲಿ ಪಠ್ಯ ಅವಸಾನಗೊಳ್ಳದೇ ಇದು ಅಂತಿಮದಲ್ಲಿ ಪ್ರಶ್ನೆಕೋಶವು ಆಗಿರುವುದು. ಈ ಕೃತಿಯ ವಿಶೇಷತೆಯನ್ನು ತೋರಿಸುತ್ತದೆ. ಈ ಹೊತ್ತಿಗೆಯು ಭಾರತ ದೇಶವನ್ನು ಕುರಿತು ಮಾಹಿತಿಯ ಕೊಶವಾಗಿದೆ. ಅನೇಕ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸುವುದು ಸುಲಭ ಕೆಲಸವಲ್ಲ. ಆದರೆ ಈ ನಿಟ್ಟಿನಲ್ಲಿ ಲೇಖಕರು ತುಂಬಾ ಪರಿಶ್ರಮಪಟ್ಟಿದ್ದಾರೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಪ್ರಮುಖ ಅಂಶವೆಂದರೆ ಲೇಖಕರ ಜ್ಞಾನದ ದಾಹ ಎಷ್ಟರಮಟ್ಟಿಗೆ ಇದೆ ಎಂಬುದನ್ನು ಈ ಆವೃತ್ತಿಯಿಂದ ತಿಳಿಯಬಹುದು.

ಭಾರತದಲ್ಲಿ ಅನೇಕ ಭಾಷೆಗಳಿದ್ದರೂ "ಎಲ್ಲರಿಗೂ ಒಳ್ಳೆಯದಾಗಲಿ" ಎಂಬ ಭಾವ ಒಂದೇ ಇದೇ ಅನೇಕ ಮತಗಳಿದ್ದರೂ, ಮಾನವೀಯ ಮೌಲ್ಯದಿಂದ ಮೆರೆಯುತ್ತಿದೆ. ಸಾಂಸ್ಕೃತಿಕ ಆಚರಣೆಗಳನ್ನು ಭಿನ್ನತೆಯಿದ್ದರೂ, ವಿಕಾಸದ ಗುರಿಯೊಂದೆ ಇದೆ. ವಿವಿಧತೆಯಲ್ಲಿ ಏಕತೆಯನ್ನು ಕಾಣಬೇಕೆಂದರೆ ಭಾರತೀಯ ಸಂಸ್ಕೃತಿಯಿಂದ ಮಾತ್ರ ಎಂಬುದನ್ನು ಸೂಕ್ಷ್ಮವಾಗಿ ಇಲ್ಲಿ ಅವಲೋಕಿಸಿದ್ದಾರೆ. ಈ ಆವೃತ್ತಿಯಲ್ಲಿಯ ಪ್ರತಿಯೊಂದು ಅಧ್ಯಾಯಗಳು ಸ್ಪಷ್ಟವಾದ ಮಾಹಿತಿಯನ್ನು ಓದುಗರಿಗೆ ನೀಡುವಲ್ಲಿ ಯಶಸ್ವಿಯಾಗಿದೆ.

**ಇದು ಭಾರತ :**

ಈ ಅಧ್ಯಾಯದಲ್ಲಿ ಸಂಪೂರ್ಣವಾದ ಮಾಹಿತಿಯನ್ನು ಅಂಕಿ ಅಂಶಗಳನ್ನೊಳಗೊಂಡ ಚಿತ್ರಸಹಿತವಾಗಿ ವಿವರಣೆಯನ್ನು ನೀಡಿದ್ದಾರೆ. ಬೇರೆ ಬೇರೆ ಪ್ರದೇಶದಲ್ಲಿ ಯಾವ ಧರ್ಮಿಯ ಜನರು ವಾಸವಾಗಿದ್ದಾರೆ. ಅವರು ಯಾವ ಭಾಷೆಯನ್ನು ಮಾತನಾಡುತ್ತಾರೆಂಬ ಮಾಹಿತಿಯನ್ನು ನೀಡಿದ್ದಾರೆ. ಭಾರತದಲ್ಲಿಯ ಹಬ್ಬಗಳು ವೈವಿಧ್ಯದಿಂದ ಆಚಾರ ವಿಚಾರ ಹೊಂದಿರುವ ಭೂ–ಪ್ರದೇಶ ಹೊಂದಿದೆ ಎಂಬುದನ್ನು ಆಧಾರಸಹಿತವಾಗಿ ಚಿತ್ರಿಸಿದ್ದಾರೆ. ಹಾಗೇಯೇ ಇಲ್ಲಿರುವ ಸಂಸ್ಕೃತಿ ನೃತ್ಯಗಳನ್ನು ಗುರುತಿಸಿ ಚಿಂತಿಸಿದ್ದಾರೆ ಮೂರ್ತಿ ಶಿಲ್ಪ ಮತ್ತು ವಾಸ್ತುಶಿಲ್ಪಗಳನ್ನು ಗುರುತಿಸಿ ವಿವರಿಸಿದ್ದಾರೆ.

**ದಕ್ಷಿಣ ಭಾರತ :**

ಕರ್ನಾಟಕ, ಆಂಧ್ರಪ್ರದೇಶ, ತಮಿಳನಾಡು, ಕೇರಳ, ಗೋವಾ ಪ್ರದೇಶಗಳನ್ನು ಕುರಿತು ಮಾಹಿತಿಯನ್ನು ನೀಡಿದ್ದಾರೆ. ಕರ್ನಾಟಕದ ಭೂಪ್ರದೇಶ ಎಷ್ಟಿದೆ. ಅಲ್ಲಿಯ ವೈವಿದ್ಯತೆಯನ್ನು ಕುರಿತು ಸಾಕಷ್ಟು ವಿವರಣಾತ್ಮಕ ವಿವರಣೆಯನ್ನು ನೀಡಿದ್ದಾರೆ. ಆಂದ್ರ ಪ್ರದೇಶವನ್ನು ಕುರಿತು ಅಲ್ಲಿ ಭೂಪ್ರದೇಶ ವಿಸ್ತೀರ್ಣ, ಭಾಷೆ, ರಾಜ್ಯ, ಪಕ್ಷಿ, ರಾಜಧಾನಿ ಒಟ್ಟು ಜಿಲ್ಲೆಗಳನ್ನು ಕುರಿತು ಸೊಗಸಾಗಿ ಅವಲೋಕಿಸಿದ್ದಾರೆ. ಹಾಗೆಯೇ ತಮಿಳಿನಾಡಿನಲ್ಲಿರುವ ಭೂಪ್ರದೇಶವನ್ನು ಅಲ್ಲಿನ ಭಾಷೆ, ಪಕ್ಷಿ ಸಂಕುಲಗಳ ಬಗೆಗೆ ಚಿತ್ರಿಸಹಿತವಾಗಿ ವಿವರಿಸಿದ್ದಾರೆ.

**ಪಶ್ಚಿಮ ಭಾರತ :**

ಈ ಅಧ್ಯಾಯದಲ್ಲಿ ಲೇಖಕರು ರಾಜಸ್ಥಾನ, ಗುಜರಾತ, ಮಹಾರಾಷ್ಟ್ರ ಈ ಎಲ್ಲ ಪ್ರದೇಶಗಳ ವಿಸ್ತೀರ್ಣವು ಎಷ್ಟರ ಮಟ್ಟಿಗೆ ಇದೆ. ಅಲ್ಲಿರುವ ಪ್ರಮುಖವಾದ ಭಾಷೆಗಳು ಯಾವವು. ಅಲ್ಲಿ ಪಕ್ಷಿ ಸಂಕುಲವು ಯಾವ ರೀತಿಯಿಂದ ಕೂಡಿದೆ. ಅವುಗಳ ರಾಜಧಾನಿ ಯಾವದು, ಒಟ್ಟು ಜಿಲ್ಲೆಗಳು ಯಾವವು ಎಂಬುದನ್ನು ಕುರಿತು ಅಂಕಿಅಂಶಗಳ ಆಧಾರಸಹಿತವಾಗಿ ಚಿತ್ರಗಳ ಸಹಾಯದಿಂದ ಅವಲೋಕಿಸಿದ್ದಾರೆ.

**ಉತ್ತರ ಭಾರತ :**

ಈ ಅಧ್ಯಾಯದಲ್ಲಿ ಜಮ್ಮು ಮತ್ತು ಕಾಶ್ಮೀರ ಭೂಪ್ರದೇಶವನ್ನು ಕುರಿತು ಚಿತ್ರಿಸಿದ್ದಾರೆ. ಕಾಶ್ಮೀರವು ಒಂದು ಪ್ರವಾಸಿಗರ ಸುಂದರವಾದ ಆಕರ್ಷಣೀಯ ಸ್ಥಳವಾಗಿದೆ. ಶ್ರೀನಗರ ಗುಮಾರ್ಗ, ಸೋನಾಮಾರ್ಗ ಮುಂತಾದವುಗಳ ಪ್ರದೇಶ ತುಂಬಾ ರಮ್ಯ ಸ್ಥಳಗಳು ಇಲ್ಲಿವೆ ಎಂಬುದನ್ನು ತಿಳಿಸಿದ್ದಾರೆ. ಅಮರನಾಥ, ವೈಷ್ಣವಿದೇವಿ ದೇವಾಲಯಗಳನ್ನು ಪವಿತ್ರವಾದ ಯಾತ್ರಾ ಸ್ಥಳಗಳು ಲಡಾಖ ಭಾರತ ಮತ್ತು ಟಿಬೇಟ ಸೇರುವ ಭಾಗವಾಗಿದೆ. ಇಲ್ಲಿ ದೊರೆಯುವ ಮೃಧುಮರ ಭಾರತದಲ್ಲಿಯೇ ಶ್ರೇಷ್ಠವಾದುದು. ಕ್ರಿಕೇಟ್ ಬ್ಯಾಟ್ ತಯಾರಿಸಲು ಬೇಕಾದ ವಿಲೋಮ ಮರಗಳು ಇಲ್ಲಿ ಅಧಿಕವಾಗಿ ದೊರೆಯುವುದು. ಹೀಗೆ ಹತ್ತು ಹಲವು ವಿಷಯಗಳನ್ನು ಬಹಳ ಸುಂದರವಾಗಿ ತಿಳಿಸಿದ್ದಾರೆ.

ಹಿಮಾಚಲ ಪ್ರದೇಶವು "ಸೇಬಿನ ರಾಜ್ಯ" ಎಂದು ಹೆಸರು ಪಡೆದಿದೆ. ೧೯೬೬ ರಲ್ಲಿ ಪಂಜಾಬ, ಹರಿಯಾಣಗಳು ಪುನರರಚನೆಯಾದಾಗ ಹಿಮಾಚಲಕ್ಕೆ ಕೆಲವು ಹೊರಭಾಗಗಳು ಸೇರಿವೆ ಎಂಬುದನ್ನು ತಿಳಿಸಿದ್ದಾರೆ. ಇಲ್ಲಿನ ಜಾನಪದ ನೃತ್ಯಗಳು, ಚಂಬಾ ಛಪೇಲಿ, ದಾಂಗಿ, ಸಾಂಗಲಾ, ಡಾಂಡಾವಾಚ, ಮಹಾಥು, ಜದ್ದಾ, ಝೈಂತಾ, ಡಾಲಿ, ಧಮಾನ್, ದಪ್, ಛರಭಾ, ಛತ್ರಾರಿ, ಕೊರ್ಕುನ್ ಹೀಗೆ ಹಲವಾರು ವೈವಿದ್ಯಪೂರ್ಣವಾದ ನೃತ್ಯಗಳನ್ನು ನಡೆಸುತ್ತಿದ್ದರು ಎಂಬುದನ್ನು ಅರಿಯಬಹುದು.

ಉತ್ತರ ಭಾರತವು ಎಂತಹ ವೈವಿದ್ಯತೆಯಿಂದ ಕೂಡಿದೆ ಎಂಬುದನ್ನು ಕುರಿತು ಲೇಖಕರು ಸಾಕಷ್ಟು ಮಾಹಿತಿಯನ್ನು ಸೇರಿಸಿ ಈ ಭೂಪ್ರದೇಶಗಳನ್ನು ಕುರಿತು ಜನರಿಗೆ ಸಂಪೂರ್ಣವಾಗಿ ವಿಶ್ಲೇಷನಾತ್ಮಕ ವಿವರಣೆಯನ್ನು ನೀಡಿದ್ದಾರೆ.

**ಪೂರ್ವ ಭಾರತ** :

ಈ ಅಧ್ಯಾಯದಲ್ಲಿ ಓರಿಸ್ಸಾ, ಪಶ್ಚಿಮ ಬಂಗಾಳ, ಸಿಕ್ಕಿಂ, ಆಸ್ಸಾಂ, ಅರುಣಾಚಲ ಪ್ರದೇಶ, ನಾಗಲ್ಯಾಂಡ, ಮಣಿಪುರ, ಮಿಜೋರಾಮ, ತ್ರಿಪುರಾ, ಮೇಘಾಲಯಗಳನ್ನು ಕುರಿತು ಅಲ್ಲಿನ ವೈವಿದ್ಯತೆಯನ್ನು ವಿವರಿಸಿದ್ದಾರೆ.

*"The Cathedral city of India"* ಎಂದರೇನು? ಅಲ್ಲಿರುವ ಪ್ರಮುಖ ಸ್ಥಳಗಳನ್ನು ಕುರಿತು ವಿವರಣೆಯನ್ನು ನೀಡಿದ್ದಾರೆ. ಹಿರಾಕೂಡ, ಆಣೆಕಟ್ಟು ವಿಸ್ತೀರ್ಣವನ್ನು ಕುರಿತು ತಿಳಿಸಿದ್ದಾರೆ. ಜಗತ್ತಿನಲ್ಲಿಯೇ ನಾಲ್ಕನೆಯ ಅತೀ ದೊಡ್ಡ ಆಣೆಕಟ್ಟು. ಮಹಾನಂದಿ ಸುತ್ತುವರಿದ ದ್ವೀಪವಾಗಿದೆ ಎಂಬುದನ್ನು ಅರಿಯಬಹುದು. ಓಡಿಸ್ಸಿ ಎಂಬ ಸುಂದರವಾದ ನೃತ್ಯವನ್ನು ಓರಿಸ್ಸಾ ದೇಶದ ಕೊಡುಗೆ ಎಂದು ಹೇಳಬಹುದು ಎಂಬುದನ್ನು ಲೇಖಕರು ತಿಳಿಯಪಡಿಸಿದ್ದಾರೆ.

**ಮಧ್ಯ ಭಾರತ** :

ಓರ್ಕಾ ದೇವಾಲಯ, ಉದಯಪೂರ ಬೋಜಪೂರಗಳು ಮಧ್ಯ ಪ್ರದೇಶದ ಸುಂದರವಾದ ಯಾತ್ರಾಸ್ಥಳಗಳಾಗಿವೆ. ಇಲ್ಲಿನ ಜಾನಪದ ನೃತ್ಯಗಳು ವಿವಿಧತೆಯಿಂದ ವೈವಿಧ್ಯಮಯದಿಂದ ಕೂಡಿದವುಗಳಾಗಿವೆ ಎಂಬುದನ್ನು ಇಲ್ಲಿ ತಿಳಿಸಿದ್ದಾರೆ. ಛತ್ತಿಸಗಡ ಸ್ವಾಭಾವಿಕ ಸಂಪನ್ಮೂಲಗಳ ಖಣಿಯಾಗಿದೆ. ಮುಖ್ಯವಾಗಿ ಖನಿಜಗಳು ಮತ್ತು ಅರಣ್ಯ ಸಂಪತ್ತಿನಿಂದ ತುಂಬಿದೆ ಎಂಬುದರ ಅರಿವನ್ನು ಮೂಡಿಸಿದ್ದಾರೆ. ಇಲ್ಲಿರುವ ಪ್ರಮುಖವಾದ ಜಾನಪದ ನೃತ್ಯಗಳು ಯಾವವು? ಅವುಗಳ ಬಗ್ಗೆ ತಿಳಿಸಲು ಪ್ರಯತ್ನಪಟ್ಟಿದ್ದಾರೆ.

**ಕೇಂದ್ರಾಡಳಿತ ಪ್ರದೇಶಗಳು** :

ದಿಲ್ಲಿಯು ಭಾರತದ ರಾಜಧಾನಿ ೧೯೫೬ ನವ್ಹೆಂಬರ ೧ ರಂದು ಕೇಂದ್ರಾಡಳಿತ ಪ್ರದೇಶವಾಯಿತು. ಇದರಲ್ಲಿ ೨೧೪ ಹಳ್ಳಿಗಳಿದ್ದು, ೭ ಜನರು ಲೋಕಸಭೆ ಮತ್ತು ೩ ಜನರು ರಾಜ್ಯಸಭೆಯನ್ನು ಪ್ರತಿನಿಧಿಸುವರು ಶತಮಾನಗಳಿಂದ ದಿಲ್ಲಿ ರಾಜಧಾನಿಯಾಗಿದೆ. ರಾಷ್ಟ್ರಪತಿ ಭವನ, ಮೊಗಲ್ ಗಾರ್ಡನ್, ಪಾರ್ಲಿಮೆಂಟರಿ ಹೌಸ್ ಇಂದ್ರಪ್ರಸ್ಥ, ಕೆಂಪುಕೋಟೆ, ಜುಮ್ಮಾ ಮಸೀದಿ ಇಂತಹ ಸುಂದರವಾದ ಮನಮೋಹಕ ಪ್ರೇಕ್ಷಣೀಯ ಸ್ಥಳಗಳನ್ನು ಹೊಂದಿದೆ ಎಂಬುದರ ವಿವರಣೆಯನ್ನು ನೀಡಿದ್ದಾರೆ.

ಒಟ್ಟಾರೆಯಾಗಿ ಈ ಹೊತ್ತಿಗೆಯಲ್ಲಿ ಇಡೀ ಭಾರತ ದೇಶದ ಸಂಪೂರ್ಣ ಮಾಹಿತಿಯನ್ನು ಒಳಗೊಂಡ ಮಹತ್ವಪೂರ್ಣ ಕೃತಿ ಇದಾಗಿದೆಂದು ಹೇಳಬಹುದು.[೧]

## ೬.೩) ಅಥಣಿ ತಾಲೂಕು : ಸಮಗ್ರ ದರ್ಶನ :

ಡಾ. ವ್ಹಿ. ಎಸ್. ಮಾಳಿ ಯವರ "ಅಥಣಿ ತಾಲೂಕುಃ ಸಮಗ್ರ ದರ್ಶನ" ಎಂಬ ಸುಂದರವಾದ ಕೃತಿಯನ್ನು "ವಿಮೋಚನಾ ಸಂಘ ಅಥಣಿ"ಯವರು ತಮ್ಮ ೫೬ ನೇ ಕೃತಿ ಕುಸುಮವನ್ನು ೨೦೦೮ ರಲ್ಲಿ ಓದುಗರ ಕೈಯಲ್ಲಿ ನೀಡಿದ್ದಾರೆ.

ಸಮಗ್ರ ದರ್ಶನದಲ್ಲಿ ಬಹು ಮುಖ್ಯವಾಗಿ ೨೮ ಲೇಖನಗಳಿವೆ. ಪ್ರತಿಯೊಂದು ಲೇಖನವು ತನ್ನದೆ ಆದ ಸೈದ್ಧಾಂತಿಕ ನೆಲೆಯ ಮೇಲೆ ನಿಂತಿವೆ. ಇಂತಹ ಪ್ರಮುಖ ಅಂಶಗಳನ್ನು ಒಳಗೊಂಡ ಕೃತಿಯು ಒಂದು ಸಮಗ್ರತೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿದೆ. ಈ ಕೃತಿಯ ರಚನಾಕಾರರು ಸಹ ತುಂಬಾ ಪಾಂಡಿತ್ಯವನ್ನು ಪಡೆದವರಾದ್ದರಿಂದ ಇನ್ನೂ ಹೆಚ್ಚು ಮಹತ್ವವನ್ನು ಪಡಿಯುವದರಲ್ಲಿ ಹಿಂಜರಿಯುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಇಂತಹ ಮಹತ್ವವನ್ನು ಪಡೆದಿರುವ ಪ್ರಮುಖ ಲೇಖನಗಳ ಕುರಿತು ಈಗ ಸ್ವಲ್ಪ ಅವಲೋಕಿಸೋಣ.

### ಭೌಗೋಳಿಕ ಸಂಗತಿಗಳು :

ಪ್ರೋ. ಸಂಗಮೇಶ ಗುಜಗೊಂಡ ಅವರ ಮೊದಲ ಲೇಖನದಲ್ಲಿ ಭೌಗೋಳಿಕ ಸನ್ನಿವೇಶಗಳನ್ನು ಸವಿಸ್ತಾರವಾಗಿ ಚಿತ್ರಿಸಿದ್ದಾರೆ. ಮಾನವ ಜೀವನದ ಮೇಲೆ ಬೌಗೋಳಿಕ ಅಂಶಗಳು ಯಾವ ರೀತಿಯಲ್ಲಿ ಬಿರುತ್ತವೆ. ಅವು ಪ್ರದೇಶದಿಂದ ಪ್ರದೇಶಕ್ಕೆ ಹೇಗೆ ಭಿನ್ನವಾಗಿರುತ್ತವೆ ಎಂಬುದರ ಬಗ್ಗೆ ವಿವರಣೆಯನ್ನು ನೀಡುತ್ತಾ ಹೋಗುತ್ತಾರೆ. ಭೂಸ್ವರೂಪದ ದೃಷ್ಠಿಯಿಂದ ಸ್ಥರವಾಗಿ ರಾಜ್ಯವನ್ನು ಎಷ್ಟು ವಿಭಾಗಗಳನ್ನಾಗಿ ವಿಂಗಡಿಸಿದ್ದಾರೆ ಎಂಬುದರ ಬಗ್ಗೆ ತಿಳಿಸಿದ್ದಾರೆ ಎಂದು ಶ್ರೀಯುತರು ಸಂಪೂರ್ಣವಾಗಿ ವಿಶ್ಲೇಷಾತ್ಮಕವಾಗಿ ವಿವರಣೆ ನೀಡಿದ್ದಾರೆ. ತಾಲೂಕನ್ನು ಪ್ರಾಕೃತಿಕವಾಗಿ ಎಷ್ಟು ಭಾಗಗಳನ್ನಾಗಿ ವಿಭಾಗಿಸಿದ್ದಾರೆ ಎಂದು ಶ್ರೀಯುತರು ಸಂಪೂರ್ಣವಾಗಿ ವಿಶ್ಲೇಷಣಾತ್ಮಕವಾಗಿ ವಿವರಣೆ ನಿಡಿದ್ದಾರೆ. ಇಲ್ಲಿರುವ ಬೆಟ್ಟಗಳು, ವಾಯುಗುಣ, ಜಲಸಂಪತ್ತು, ನದಿಯ ಬಗ್ಗೆ, ಸ್ವಾಭಾವಿಕ ಸಸ್ಯವರ್ಗ, ಪ್ರಾಣಿ ಸಂಪತ್ತು, ಖನಿಜ ಹೀಗೆ ನಾನಾ ರೀತಿಯ ಸಂಪತ್ತನ್ನು ಹೊಂದಿರುವ ವೈವಿಧ್ಯಮಯ ಪ್ರದೇಶವೆಂದು ಸಂಪೂರ್ಣ ಮಾಹಿತಿಯನ್ನೇ ಇಲ್ಲಿ ನೀಡಿದ್ದಾರೆ.

---

೧. "ಇದು ಭಾರತ" ಲೇಖಕರು ಸುರೇಶ ಎಂ. ಕುಲಕರ್ಣಿ ೨೦೦೭ ರಲ್ಲಿ ವಿಮೋಚನಾ ಸಂಘ ಅಥಣಿ.

**ಚಾರಿತ್ರಿಕ ಅವಲೋಕನ :**

ಶ್ರೀ ಅಪ್ಪಣ್ಣ ಎಸ್. ಹಂಜಿಯವರು ಬರೆದಿರುವ ಈ ಲೇಖನವು ಅಥಣಿ ತಾಲೂಕವು ಯಾವ ರೀತಿಯಲ್ಲಿ ಚಾರಿತ್ರಿಕವಾದ ಹಿನ್ನೆಲೆಯನ್ನು ಹೊಂದಿದೆ ಎಂಬುದರ ಬಗ್ಗೆ ಅವಲೋಕಿಸಿದ್ದಾರೆ. ಬೆಳಗಾವಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಪುನರಚಿಸುವ ನಿಟ್ಟಿನಲ್ಲಿ ಅಥಣಿ ಪರಿಸರದ ಕೊಡುಗೆ ಅಪಾರವಾಗಿದೆ. ಈ ಪರಿಸರವು ತನ್ನ ಒಡಲಿನಲ್ಲಿ ಇತಿಹಾಸ ಪೂರ್ವ ಕಾಲದಿಂದ ಸಾಂಸ್ಕೃತಿಕ ಬೆಳವಣಿಗೆಯ ಎಲ್ಲ ಘಟ್ಟಗಳ ನೆನಹುಗಳನ್ನು ಒಳಗೊಂಡಿದೆ. ಈ ಕುರುಹುಗಳು ಇಲ್ಲಿನ ಪರಿಸರದ ಸಮಕಾಲೀನ ಸಾಂಸ್ಕೃತಿಕ ಇತಿಹಾಸದ ವಿವಿಧ ರೀತಿಯ ಮುಖಗಳನ್ನು ಮತ್ತು ಈ ಪರಿಸರದಲ್ಲಿ ಹಲವು ಶತಮಾನಗಳಲ್ಲಿ ಮಾನವ ಸಂಸ್ಕೃತಿ ಬೆಳೆದು ಬಂದ ದಾರಿಯ ಕಿರು ನೋಟವನ್ನ ಪರಿಚಯಿಸುತ್ತದೆ. ಇಲ್ಲಿಯವರೆಗೆ ಅಥಣಿ ಪರಿಸರದ ಚಾರಿತ್ರಿಕತೆಯನ್ನು ಅಂಕಿ ಅಂಶಗಳ ಆಧಾರ ಸಹಿತವಾಗಿ ಈ ಲೇಖನದಲ್ಲಿ ಅವಲೋಕಿಸಿದ್ದಾರೆ.

ಡಾ. ಎಂ. ಎಸ್. ವಾಲಿ ಯವರ ಈ ಲೇಖನವು ತುಂಬಾ ಮಹತ್ವವನ್ನು ಪಡೆದಿದೆ ಎಂಬುದು ನಮಗೆ ಈ ಲೇಖನದ ಶಿರ್ಷಿಕೆಯನ್ನು ನೋಡಿದಾಗ ಗೋತ್ತಾಗುತ್ತದೆ. ಕರ್ನಾಟಕದ ಬೇರೆ ಕಡೆಗಳಲ್ಲಿರುವಂತೆ ಅಥಣಿಯ ತಾಲೂಕಿನಲ್ಲಿಯೂ ಸಹ ಹಲವು ಮತ–ಪಂಥಗಳು ವಿವಿಧ ವರ್ಗದ ಜನ ಸಮುದಾಯ ವಾಸವಾಗಿದೆ ಎಂಬುದರ ಬಗ್ಗೆ ಇಲ್ಲಿ ತಿಳಿಸಿದ್ದಾರೆ. ಅವರ ಧರ್ಮದ ಇಲ್ಲಿರುವ ಭಾಷೆಗಳು ಯಾವವು? ಇಂಬುದರ ವೈಶಿಷ್ಟ ಪೂರ್ಣವಾದ ಸಂಪೂರ್ಣ ಮಾಹಿತಿಯನ್ನು ನೀಡಿದ್ದಾರೆ.

**ವಾಸ್ತುಶಿಲ್ಪ ಮತ್ತು ಸ್ಮಾರಕಗಳು :**

ಶ್ರೀ ಆರ್. ಎ. ಮುತಾಲಿಕ ದೇಸಾಯಿಯವರು ಬರೆದಿರುವ ಲೇಖನದಲ್ಲಿ ಕಂಡು ಬರುವದೇನೆಂದರೆ ಒಂದು ಪ್ರದೇಶದ ಪ್ರಾಚೀನತೆ ಹಾಗೂ ಇತಿಹಾಸವನ್ನು ತಿಳಿಯಬೇಕಾದರೆ ಆ ಪ್ರದೇಶದಲ್ಲಿರುವ ಪ್ರಮುಖ ಅಂಶಗಳಿಂದರೆ ವಾಸ್ತುಶಿಲ್ಪ ಮತ್ತು ಸ್ಮಾರಕಗಳು. ಈ ಒಂದು ಆಧಾರದಿಂದ ಆ ಪ್ರದೇಶವು ಎಷ್ಟು ವೈಶಷ್ಠಪೂರ್ಣವಾದ ಪ್ರದೇಶ ಎಂಬುದು ನಮ್ಮ ಅರಿವಿಗೆ ಬರುತ್ತದೆ. ಈ ಆಧಾರದಲ್ಲಿ ಮಹತ್ವಪೂರ್ಣವಾದ ಅಂಶಗಳನ್ನು ಕೆತ್ತಿಹಾಕಿ ಜನರಿಗೆ ಅಥಣಿ ತಾಲೂಕಿನ ವಾಸ್ತುಶಿಲ್ಪ ಮತ್ತು ಸ್ಮಾರಕಗಳ ಕುರಿತು ಮಾಹಿತಿಯನ್ನು ನೀಡಿದ್ದಾರೆ.

**ಶ್ರೀ ಮುರುಘೇಂದ್ರ ಶಿವಯೋಗಿಗಳು :**

"ಸುವರ್ಣದ ಕಿರೀಟ ದೂರವಿರಿಸಿ
ಶಿವಯೋಗದ ಕಿರೀಟ ಧರಿಸಿದನಯ್ಯ
ಸರ್ವ ಸಾಹಿತ್ಯವ ತೆಗೆದೆರಿಸಿ

ಅಪ್ಪನ ವಚನ ಸಾಹಿತ್ಯವ ಅಪ್ಪಿಕೊಂಡನಯ್ಯ
ಮೇಲ ಮುಕ್ತಿಯ ಅಂಕುರಕ್ಕೂ ಅಂಬಿಕೊಳ್ಳದೆ
ಕಿಂಕರರ ಕಿಂಕರನಾದನಯ್ಯ
ಅಧಿಕಾರ ನಾಮ ಸೀಮೆಗಳ ಮೆಟ್ಟಿ
ನಿಜನಿರಂಜನ ಮುರುಘೇಂದ್ರ ಶಿವಯೋಗಿಯಾದನಯ್ಯ ಅಥಣೀಶ"
(ಅಥಣಿ ತಾಲೂಕು : ನಮ್ಮ ದರ್ಶನ ಪುಟ-೩೬ರಲ್ಲಿ)

ವಚನ ಸಾಹಿತ್ಯದ ಮೂಲಕ ಶ್ರೀ ಪ್ರಭುಚನ್ನಬಸವ ಸ್ವಾಮೀಜಿಯವರು ಶಿವಯೋಗಿಗಳನ್ನು ಕುರಿತು ಬರೆದ ಲೇಖನವು ತುಂಬಾ ರಸವತ್ತಾಗಿದೆ. ಮನುಜ ಧರ್ಮ, ಪೋಷಿಸಲು ಮನುಜಮತ ಪಾಲಿಸಲು ವಿಭೂಪುರುಷ ನಮ್ಮ ನಾಡಿನಲ್ಲಿ ಅದೂ ಅಥಣಿಯಲ್ಲಿ ಬೆಳೆದು ಬಂದ ರೀತಿಯನ್ನು ಮನಸ್ಸಿಗೆ ನಾಟುವಂತೆ ಚಿತ್ರಿಸಿದ್ದಾರೆ. ಅವರ ಸಿದ್ಧಿ ಇಂತಹದು. ಅವರ ಯೋಗಗಳು ಯಾವ ರೀತಿಯಲ್ಲಿದ್ದವು ಅವರು ಜನತಾ ಪರಿವರ್ತನೆಗೆ ತಮ್ಮ ತಾವು ಹೇಗೆ ತೊಡಗಿಸಿಕೊಂಡರು ಎಂಬುದರ ಕುರಿತು ತುಂಬಾ ರಸವತ್ತಾಗಿ ಲೇಖಕರು ಲೇಖನದಲ್ಲಿ ವಿವರಿಸಿದ್ದಾರೆ.

**ಸಾಹಿತ್ಯ ದರ್ಶನ :**

ಡಾ. ವ್ಹಿ. ಎಸ್. ಮಾಳಿ ಯವರು ರಚಿಸಿರುವ ಈ ಲೇಖನವು ತುಂಬಾ ಮಹತ್ವ ಪೂರ್ಣವಾದ ಮಾಹಿತಿಯನ್ನು ಒಳಗೊಂಡಿದೆ. ಈ ಸಾಹಿತ್ಯ ದರ್ಶನದಲ್ಲಿ ಸಂಕ್ಷಿಪ್ತವಾಗಿ ಶ್ರೀಯುತರು ಭೌಗೋಳಿಕ ಸನ್ನಿವೇಶಗಳ ಕುರಿತು ಮಾಹಿತಿಯನ್ನು ನೀಡಿದ್ದಾರೆ. ಈ ತಾಲೂಕಿನಲ್ಲಿ ಎಂತಹ ಮಹಾಕವಿಗಳು ಆಗಿ ಹೋಗಿದ್ದಾರೆಂಬುದರ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಿದ್ದಾರೆ. ಇಲ್ಲಿ ಮಠಾದೀಶರ ಸಾಹಿತ್ಯ, ಕವಿಯತ್ರಿಯರು, ಸಂಶೋಧಕರು, ಪತ್ರಿಕಾಲೋಕನ, ಪ್ರಕಾಶನ ಸಂಸ್ಥೆಗಳು, ಜನಪದ ಕವಿಗಳು ಅಥಣಿಯ ಖನಿ ಹೀಗೆ ಹತ್ತು ಹಲವು ವಿಷಯಗಳನ್ನು ಒಳಗೊಂಡ ಸಾಹಿತ್ಯದ ವಿವಿಧ ಮಗ್ಗಲುಗಳನ್ನು ಕುರಿತು ವಿಮರ್ಶಾತ್ಮಕವಾಗಿ ಉಲ್ಲೇಖಿಸಿದ್ದಾರೆ.

**ರಂಗ ಭೂಮಿ ಮತ್ತು ಜನಪದ ಕಲಾವಿದರು :**

ಶ್ರೀ ಕೆ. ಎಲ್. ಕುಂದರಗಿಯವರು ಬರೆದಿರುವ ಲೇಖನವು ಕಲಾತ್ಮಕತೆಯಿಂದ ಕೂಡಿದೆ. ಅಥಣಿ ತಾಲೂಕಿನಲ್ಲಿ ರಂಗಭೂಮಿಗೆ ಸೇವೆಯನ್ನು ಸಲ್ಲಿಸಿದ ಮಹಿಸಿಯರನ್ನು ಸ್ಮರಿಸಲಾಗಿದೆ. ಅವರ ಜೀವನ ಶೈಲಿಯನ್ನು ಕುರಿತು ಹಾಗೂ ಅವರು ಯಾವ ಯಾವ ಪಾತ್ರಗಳನ್ನು ನಿರ್ವಹಿಸುತ್ತಿದ್ದರು ಎಂಬುದರ ಬಗ್ಗೆ ಲೇಖಕರು ತಿಳಿಸಿದ್ದಾರೆ. ಅಷ್ಟೆ ಅಲ್ಲದೇ ಈ ಕ್ಷೇತ್ರದಲ್ಲಿ ಜನಪದ ಕಲಾವಿದರಿಗೂ ಏನೂ ಕಮ್ಮಿ ಇಲ್ಲಾ, ಎಂಬಂತೆ ಸಾಕಷ್ಟು ಜನ ಜನಪದಿಯರು ತಮ್ಮ ಸೇವೆಯನ್ನು ನೀಡಿದರ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ. ಇನ್ನು ನಾಟಕಗಳಿಗೆ ಬಂದರೇ ಸಣ್ಣಾಟಕ್ಕೆ ಮತ್ತು ಬೈಲಾಟಗಳಿಗೆ ಸಹ ಆಥಣಿ ತಾಲೂಕು ತನ್ನ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಬಳವಾಡದ ನದಾಫ ಇವರು "ರಾಧಾ-ಕೃಷ್ಣ" ಅಂತಾ ಬೈಲಾಟ ಮಾಡಿ ಪ್ರಸಿದ್ಧಿಪಡೆದಿದ್ದರು. ಚಮಕೇರಿ ಗ್ರಾಮದವರು ಕಡಿಮೆಯಲ್ಲಾ ಅವರ

"ಶಿವಶಕ್ತಿ ಸಂವಾದ" ಅನ್ನುವ ಬೈಲಾಟ ಪ್ರಸಿದ್ಧವಾಗಿತ್ತು. ಹೀಗೆ ರಂಗಭೂಮಿಯಲ್ಲಿ ಅನೇಕ ರೀತಿಯಲ್ಲಿ ಅಥಣಿ ತಾಲೂಕಿನಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆಂಬುದನ್ನು ಈ ಲೇಖನದ ಮೂಲಕ ತಿಳಿಯಬಹುದು ಹಾಡುಗಾರಿಕೆಯಲ್ಲಿಯು ಕೂಡ ಅಥಣಿಯ ತಾಲೂಕಾ ಒಂದು ಹೆಜ್ಜೆ ಮುಂದೆ ಎಂದು ತಿಳಿಯಬಹುದು. ಬೇರೆ ಬೇರೆ ಗ್ರಾಮಗಳಲ್ಲಿ ತಮ್ಮದೇ ಆದ ಸೋಗಡನ್ನು ಹೊಂದಿದ ಹಾಡುಗಾರರು ಇದ್ದರು ಎನ್ನುವ ಅಂಶಗಳನ್ನು ಈ ಲೇಖನವು ಸ್ಪಷ್ಟಪಡಿಸುತ್ತದೆ.

**ಸಾಂಸ್ಕೃತಿಕ ವೈವಿಧ್ಯತೆಗಳು :**

ಡಾ. ಅಶೋಕ ನರೋಡೆಯವರು ರಚಿಸಿರುವ ಈ ಲೇಖನವು ತುಂಬಾ ರಸವತ್ತತೆಯಿಂದ ಕೂಡಿದೆ. ಅಥಣಿ ತಾಲೂಕವು ಸಾಂಸ್ಕೃತಿಕವಾಗಿ ಎಂತಹ ವೈವಿಧ್ಯತೆಯಿಂದ ಕೂಡಿದೆ ಎಂಬುದರ ಬಗ್ಗೆ ಸೋಗಸಾಗಿ ಚಿತ್ರಿಸಿದ್ದಾರೆ, ಪೌರಾಣಿಕವಾದ ಅಂಶಗಳನ್ನು ಕುರಿತು ಶ್ರೀಯುತರು ಉಲೇಖಿಸಿದ್ದಾರೆ. ಅಥಣಿ ತಾಲೂಕಿನಲ್ಲಿ ಬೇರೆ ಬೇರೆ ಹೆಸರುಗಳಿಂದ ಹರಿಯುವ ಪವಿತ್ರ ನದಿಗಳು ಈ ದೇಶದಲ್ಲಿ ಹರಿದಿರುವ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಸಪ್ತಸಾಗರ, ರಾಮತೀರ್ಥ, ಖಿಳೇಗಾಂವ, ಮಂಗಸೂಳಿ ಮಲ್ಲಯ್ಯ, ಕೊಕಟನೂರ ಹೀಗೆ ಹಲವಾರು ಐತಿಹಾಸಿಕ ಪ್ರದೇಶಗಳನ್ನು ಕುರಿತು ಸಂಪೂರ್ಣ ವಿವರ ಈ ಲೇಖನದಲ್ಲಿದೆ. ಜನಪದ ಆಚರಣೆಗಳು ಯಾವ ರೀತಿಯಲ್ಲಿ ಇಲ್ಲಿ ನಡೆಯುತ್ತಿದ್ದವು ಎನ್ನುವ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೋಡಬಹುದು. ಅಷ್ಟೇ ಅಲ್ಲದೆ ಸಾಹಿತ್ಯ ಪರಂಪರೆಯು ತಾಲೂಕಿನಲ್ಲಿ ತನ್ನ ಚಾಪು ಯಾವ ರೀತಿ ಹರಡಿದೆ ಎಂಬುದರ ಬಗ್ಗೆ ಲೇಖಕರು ವಿವರಣೆ ನೀಡಿದ್ದಾರೆ.

ಸಂಪೂರ್ಣವಾಗಿ ಈ ಕೃತಿಯನ್ನು ತಿರಿವಿ ನೋಡಿದಾಗ ಇಂತದ ಅನೇಕ ಮಹತ್ವ ಪೂರ್ಣ ಲೇಖನಗಳು ನಮ್ಮ ಮನಸ್ಸಿಗೆ ನಾಟುವಂತೆ ರಚನೆಗೊಂಡಿವೆ ಎಂಬುದರಲ್ಲಿ ಯಾವ ಸಂದೇಹವು ಇಲ್ಲ. ಒಟ್ಟಾರೇಯಾಗಿ ಈ ಕೃತಿಯನ್ನು ಓದುಗರು ತಮ್ಮ ಕೈಯಲ್ಲಿ ಹಿಡಿದರೆ ಸಾಕು ಇಡೀ ಅಥಣಿ ತಾಲೂಕಿನ ಸಮಗ್ರ ದರ್ಶನವಾಗುವದರಲ್ಲಿ ಯಾವ ಸಂದೇಹವು ಇಲ್ಲಾ.[೧]

## ೬.೪) ಹಿಂದೂ ಧರ್ಮ (ಯಶಸ್ಸು ಮತ್ತು ಯಾತನೆ) :

ಶ್ರೀ ಎಸ್. ಕೆ. ಕುಲಕರ್ಣಿಯವರ ಇಂಗ್ಲೀಷ ಕೃತಿಯನ್ನು ಶೇಷಗಿರಿ ಹಾರನಹಳ್ಳಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಹಿಂದೂ ಧರ್ಮ (ಯಶಸ್ಸು ಮತ್ತು ಯಾತನೆ) ಈ ಮೌಲ್ಯಯುತವಾದ ಕೃತಿಯನ್ನು ವಿಮೋಚನಾ ಸಂಘ ಅಥಣಿಯವರ ತಮ್ಮ ೫೪ ನೇ ಪ್ರಕಟಣೆಯಾಗಿ ಹೊರತಂದಿದ್ದಾರೆ ಈ ಕೃತಿಯು ಹಿಂದೂ ಧರ್ಮ ಹೇಗೆ ಉಗಮವಾಯಿತು ಮತ್ತು ಅದರ ವಿಕಾಸ ಬೆಳವಣಿಗೆಯ ಹಂತಗಳು ಅದರ ಪ್ರಮುಖ ಲಕ್ಷಣಗಳು, ಸಾಧನೆ ವೈಪಲ್ಯಗಳನ್ನು ಕುರಿತು ಸಂಪೂರ್ಣ ವಿವರಣೆಯನ್ನು ನೀಡಿದ್ದಾರೆ. ಹಿಂದೂ ಧರ್ಮವು ಎದುರಿಸಿದ ಹಾಗೂ ಎದುರಿಸುತ್ತಿರುವ ಸಮಸ್ಯೆಗಳನ್ನು ವಿವರಣಾತ್ಮಕವಾಗಿ ಕೃತಿಯು ಚರ್ಚಿಸುತ್ತದೆ.

೧. "ಅಥಣಿ ತಾಲೂಕು : ಸಮಗ್ರ ದರ್ಶನ" ಪ್ರಧಾನ ಸಂಪಾದಕರು ಡಾ. ವ್ಹಿ. ಎಸ್. ಮಾಳಿ. ೨೦೦೮ ರಲ್ಲಿ "ವಿಮೋಚನಾ ಸಂಘ ಅಥಣಿ".

ಹಿಂದೂ ಧರ್ಮದ ಕೃತಿಯು ಮೇಲ್ನೋಟಕ್ಕೆ ಒಂದೇ ಎಂದು ಕಂಡುಬಂದರು ಸಹ ಇದರಲ್ಲಿ ಎಲ್ಲ ಧರ್ಮಗಳ ಸಾಮರಸ್ಯ ಮಡುಗಟ್ಟಿದೆ ಎಂಬುದನ್ನು ಅರಿಯಬಹುದಾಗಿದೆ. ಇಸ್ಲಾಮ ಹಾಗೂ ಕ್ರಿಶ್ಚಿನ್ ಧರ್ಮಗಳಂತೆ ಹಿಂದೂ ಧರ್ಮವು ತನ್ನ ಹುಟ್ಟು ಮತ್ತು ಬೆಳವಣಿಗೆ ಒಬ್ಬನೆ ವ್ಯಕ್ತಿಯ ತತ್ವಗಳನ್ನು ಅವಲಂಬಿಸಿಲ್ಲ ಅಥವಾ ಒಬ್ಬನೇ ಗುರುವಿನ ಪ್ರವಚನವನ್ನು ಅವಲಂಬಿಸಿಲ್ಲ. ಅದು ಭಾರತೀಯ ನಾಗರೀಕತೆಯ ಪ್ರಾರಂಭದಿಂದಲೂ ಹಾಗೂ ಅನೇಕ ಋಷಿಮುನಿಗಳ ಪಾಂಡಿತ್ಯ ಚೈತನ್ಯ ಬಲದಿಂದ ರೂಪಗೊಂಡಿರುವ ಹಿಂದೂ ಧರ್ಮ ಎಂಬುದನ್ನು ಲೇಖಕರು ತಿಳಿಸಲು ಪ್ರಯತ್ನಪಟ್ಟಿದ್ದಾರೆ.[೧]

ವಿಷಯ ಪ್ರವೇಶ ಹಿಂದೂ ಧರ್ಮ ಒಂದೇ ಐದು ಸಾವಿರ ವರುಷಗಳ ದೀರ್ಘ ಇತಿಹಾಸವಿದ್ದ ಜೀವಂತ ಪುರಾತನ ಧರ್ಮ ಇದನ್ನ ಹಿಂದಿನ ಕಾಲದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದರು. ಮುಂದೆ ಬಂದು ಐತಿಹಾಸಿಕ ಕಾರಣಗಳಿಂದ ಅದು ಹಿಂದೂ ಧರ್ಮವೆಂದು ಹೆಸರು ಪಡೆಯಿತು ಎಂಬುದನ್ನು ಈ ಪ್ರವೇಶದಲ್ಲಿ ಕಾಣಬಹುದು. ಈ ಹೊತ್ತಿಗೆಯಲ್ಲಿ ಜಾತಿಯತೆಯನ್ನು ಹಾಗೂ ಅಸ್ಪ್ರಶ್ಯತೆಯನ್ನು ಕುರಿತು ತುಂಬಾ ಸೊಗಸಾಗಿ ನಿರೂಪಿಸಿದ್ದಾರೆ. ಇಲ್ಲಿ ಜಾತಿಯ ಉಗಮವನ್ನು ಪ್ರಸ್ತುತ ಕಾಲದ ಸಾಮಾಜಿಕ ಹಿನ್ನೆಲೆಯಲ್ಲಿ ಎಂತಹ ಧರ್ಮ ತಲೆ ಎತ್ತಿ ಬಾಳಿತು ಎಂಬುದನ್ನು ಕಾಣಬಹುದು. ಅಸ್ಪ್ರಶ್ಯತೆ ಜಾತಿಯತೆಯ ಒಂದು ಅಂಗವಾಗಿ ಉಗಮಿಸಿದ್ದರೂ. ಇವೆರಡನ್ನು ಒಂದೇ ರೀತಿಯಲ್ಲಿ ತಿಳಿಯುವುದು ಸರಿಯಾಗಲಾರದು ಎಂಬುದನ್ನು ಲೇಖಕರು ವಿವರಿಸುತ್ತಾರೆ. ಹಿಂದಿನ ಕಾಲದಲ್ಲಿ ಹಿಂದೂಗಳು ತಮ್ಮ ಜನರನ್ನು ವರ್ಣಗಳ ಆಧಾರದ ಮೇಲೆ ವಿಭಾಗಿಸಿದ್ದರಿಂದ ಅಲ್ಲಿಂದ ಕಾಲಕ್ರಮದಲ್ಲಿ ಜಾತಿ ಎಂಬ ಬೇರೆ ಚಿಗೂರೊಡಿಯಿತೆಂಬ ವಾದವನ್ನು ಲೇಖಕರು ಮುಂಡಿಸುತ್ತಾರೆ. ಹಿಂದೂ ಧರ್ಮದಲ್ಲಿ ಆಗು ಹೋಗುಗಳಿಗೆ ಲೆಕ್ಕವಿಲ್ಲ. ಈ ಕೃತಿಯಲ್ಲಿ ಜಾತಿಯತೆ ಎಂಬುದು ಬೇರೂರಿದೆ. ಇಲ್ಲಿ ಯಾವ ರೀತಿಯಲ್ಲಿ ಜಾತಿಯು ಬೆಳೆದು ಬಂದಿತು ಎಂಬುದನ್ನು ಶ್ರೀ ರಾಮಕೃಷ್ಣ ಆಶ್ರಮದ ಸ್ವಾಮಿ ರಂಗನಾಥನಂದರು ಜಾತಿಯತೆಯ ಮೇಲೆ ಬರೆಯುತ್ತ ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ.[೨] 

"ವೇದಾಂತಕ್ಕೆ ಮನೆಯಿದ್ದರೂ ಭಾರತ ಮನುಷ್ಯ-ಮನುಷ್ಯರ ನಡುವಿನ ಅಂತವನ್ನು ಬೇರೆ ಯಾವ ದೇಶಕ್ಕಿಂತ ಹೆಚ್ಚುಮಾಡಿದೆ ಮತ್ತು ಇದಕ್ಕಾಗಿ ನೂರಾರು ವರುಷಗಳ ಗುಲಾಮಿಯ ಬೆಲೆ ಎತ್ತಿದೆ" ಎಂಬುದನ್ನು ಲೇಖಕರು ಶ್ರೀಗಳ ಮಾತನ್ನು ವಿವರಸಿ ಕೃತಿಗೊಂದು ಹೆಚ್ಚಿನ ಮಹತ್ವ ತಂದುಕೊಟ್ಟಿದ್ದಾರೆ. ಆಧುನಿಕ ಭಾರತದಲ್ಲಿ ಜಾತಿಯತೆಯು ಯಾವ ರೀತಿಯಲ್ಲಿ ತಾಂಡವಾಡುತ್ತಿದೆ ಎಂಬುದನ್ನು ಆಧಾರ ಸಹಿತವಾಗಿ ಲೇಖಕರು ವಿವರಣೆಯನ್ನು ನೀಡಿದ್ದಾರೆ.

---

೧. ಶ್ರೀ ರಾಮಕೃಷ್ಣಾ ಆಶ್ರಮದ ಸ್ವಾಮಿ ರಂಗನಾಥನಂದರು ಅಭಿಪ್ರಾಯದ ಮಾತುಗಳು "ವೇದಾಂತ ಬೆಲೆ ಎತ್ತಿದೆ" ಪುಟ-೮೬ ರಲ್ಲಿ ೧೩ ನೇ ಪಾದದಲ್ಲಿ.

೨. ಹಿಂದೂ ಧರ್ಮ(ಯಶಸ್ಸು ಮತ್ತು ಯಾತನೆ) ಲೇಖಕರು ಶೇಷಗಿರಿ ಹಾರನಹಳ್ಳಿ ೨೦೦೯ ರಲ್ಲಿ ವಿಮೋಚನಾ ಸಂಘ ಅಥಣಿ.

### ೬.೫) ಬದುಕಲು ಇದೊಂದೇ ದಾರಿ :

ಕೆ. ಬಿ. ಫಡಕೆಯವರು ಬರೆದ "ಬದುಕಲು ಇದೊಂದೇ ದಾರಿ" ಎಂಬ ಸುಂದರವಾದ ಮೌಲ್ಯಯುತವಾದ ಕೃತಿಯನ್ನು ಅಥಣಿಯ ವಿಮೋಚನಾ ಸಂಘವು ೩೧ ನೇ ಪ್ರಕಟಣೆಯಾಗಿ ಪ್ರಕಟಿಸಿದೆ. ಈ ಕೃತಿಯ ತುಂಬಾ ವಿಮರ್ಶಾತ್ಮಕವಾದ ಅಂಶಗಳನ್ನು ಒಳಗೊಂಡಿದೆ ಇಲ್ಲಿನ ಪ್ರೀತಿಯೊಂದು ವಿಚಾರಧಾರೆಗಳು ಜನರಿಗೆ ಬದುಕಲು ಒಂದೇ ದಾರಿಯಲ್ಲಿ ಜೀವನವನ್ನು ಅರಿತುಕೊಂಡು ನಡೆದರೆ ಸಾಕು ನಾನಾ ದಾರಿಗಳು ಸಿಗುತ್ತವೆಂಬುದನ್ನು ಲೇಖಕರು ಬಹಳ ಮಾರ್ಮಿಕವಾಗಿ ಮಂಡಿಸಿದ್ದಾರೆ. ಕೃಷಿ ವಿಜ್ಞಾನದಲ್ಲಿ ಪದವಿಗಳಿಸಿದ ಶ್ರೀ ಕೃ ವಾ. ಪಡಕೆ ಅವರು ಶಿಕ್ಷಕ ವೃತ್ತಿ ಕೈಕೊಂಡು ಒಬ್ಬ ಆದರ್ಶ ಶಿಕ್ಷಕರಾಗಿ ಹೆಸರುಗಳಿಸಿದ್ದಾರೆ. ಅನೇಕ ಜನ ಪ್ರಜ್ಞಾವಂತ ವಿದ್ಯಾರ್ಥಿಗಳನ್ನು ಹಾಗೂ ಸಾಮಾಜಿಕ ಕಾರ್ಯಕರ್ತರನ್ನು ಹೀಗೆ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಸೇವೆಯನ್ನು ಗಣನೀಯವಾಗಿ ಸಲ್ಲಿಸಿ ಸಾರ್ಥಕ ಜೀವನ ಅವರದ್ದಾಗಿದೆ.

"ಬದುಕಲು ಇದೊಂದೇ ದಾರಿ" ಈ ಕೃತಿಯಲ್ಲಿ ಲೇಖಕರು ಪ್ರತಿಯೊಬ್ಬ ವ್ಯಕ್ತಿಯು ಸಮಾಜದಲ್ಲಿ ಯಾವ ರೀತಿಯಲ್ಲಿ ತನ್ನ ಜೀವನವನ್ನು ಸಾಗಿಸಬಹುದು. ಜೀವನವೆಂದರೇನು? ಅದನ್ನು ಹೇಗೆ ಅರಿಯಬೇಕು ಎಂಬುದನ್ನು ಒಂದೊಂದಾಗಿ ವಿವರಿಸುತ್ತಾ ಹೋಗುತ್ತಾರೆ. ಇಲ್ಲಿ ನಾವು ವಿಚಾರ ಮಾಡತಕ್ಕಂತಹ ಅಂಶಗಳೆಂದರೆ ಲೇಖಕರು ವಿನೂತನವಾಗಿ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಪ್ರಶ್ನೆಗಳನ್ನು ಯಾರಾದರೊಬ್ಬರು ಕೇಳಿದರು ಆ ಪ್ರಶ್ನೆಗಳಿಗೆ ಉತ್ತರ ಹೇಳಲು ಪ್ರಯತ್ನ ಪಡುತ್ತೇವೆ. ಆದರೆ ಇಲ್ಲಿ ಲೇಖಕಿ ಸ್ವತಃ ತಾವೇ ಪ್ರಶ್ನೆಗಳನ್ನು ಹಾಕಿಕೊಂಡು ಅದಕ್ಕೆ ಉತ್ತರವನ್ನು ಹೇಳಲು ವಿನೂತನ ರೀತಿಯಲ್ಲಿ ಪ್ರಯತ್ನ ಪಟ್ಟಿದ್ದಾರೆ.

ಧರ್ಮ ಎಂದರೇನು? ಪಂಥ ಎಂದರೇನು? ಜಾತಿ ಹೀಗೆ? ಅನೇಕ ರೀತಿಯ ಸಮಾಜದಲ್ಲಿನ ಮೌಲ್ಯಯುತವಾದ ಅಂಶಗಳನ್ನು ಕುರಿತು ಅತ್ಯಂತ ಸರಳೀಕರಣ ರೀತಿಯಲ್ಲಿ ಲೇಖಕರು ಸ್ಪಷ್ಟಪಡಿಸಿದ್ದಾರೆ. ಜಾತಿ ಪಂಥಗಳನ್ನು ಹಿಡಿದುಕೊಂಡು ಜನರು ಯಾವ ರೀತಿಯಲ್ಲಿ ಮೌಢ್ಯತೆಯನ್ನು ಮರೆಯುತ್ತಾರೆ. ಅದನ್ನು ಹೋಗಲಾಡಿಸಬೇಕಾದರೆ ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ಸುಂದರವಾದ ರಸವತ್ತಾದ ಸಾಲುಗಳಿಂದ ತಿಳಿಪಡಿದ್ದಾರೆ. ಮೋಕ್ಷವನ್ನು ಅಥವಾ ಮುಕ್ತಿಯನ್ನು ಪಡೆಯಬೇಕಾದರೆ ಏನು ಮಾಡಬೇಕು ಎಂಬುದನ್ನು ಸರಳೀಕರಿಸಿದ್ದಾರೆ. ಸಾವಿರಾರು ವರ್ಷಗಳ ಸಂಸ್ಕಾರಗಳಿಂದ ಮನುಷ್ಯನಲ್ಲಿ ರೂಡಿ ವಿಚಾರಗಳು ಮಾಡುವಂತಿದೆ. ಈ ಒಂದು ನಿಟ್ಟಿನಲ್ಲಿ ಅನೇಕ ಅಂಶಗಳನ್ನು ಮುಕ್ತಿಯ ಮಾರ್ಗವನ್ನು ಹೇಗೆ ಅನುಸರಿಸಬೇಕು ಅವುಗಳನ್ನು ರೂಡಿಸಿಕೊಳ್ಳುವ ರೀತಿ ಎಂತಹದು ಎಂಬುದನ್ನು ತಿಳಿಸಿದ್ದಾರೆ.

ಸುಖಮಯ ಮತ್ತು ಸಂಪನ್ನ ಜೀವನ ಬದುಕುವ ದಾರಿ. ನಾವು ಎಲ್ಲರು ಬದುಕುವ ದಾರಿಯು ವರ್ಣಾಶ್ರಮದ ಧರ್ಮದ ದಾರಿಯು ಹಿಂದಿನ ಕಾಲದಲ್ಲಿ ಜನರು ಯಾವ ರೀತಿಯಲ್ಲಿ ಜೀವನ ಸಾಗಿಸಿದರೆ ಸುಖಮಯ ಆನಂದದಿಂದ ಕೂಡಿರುತ್ತದೆಂಬುದನ್ನು ಅರಿಯಲು ಪ್ರಯತ್ನಪಟ್ಟರು.

ಆವಾಗ ಎಲ್ಲರು ಸೇರಿಕೊಂಡು ಸಮಾಜ ಜೀವನಕ್ಕೆ ಒಂದು ದಾರಿ ಹಾಕಿಕೊಟ್ಟರು ಅದುವೇ ವರ್ಣಾಶ್ರಮ ಧರ್ಮ ಎಂಬುದನ್ನು ಲೇಕಕರು ಈ ಕೃತಿಯಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ.

ಅನ್ಯಾಯರಹಿತವಾದ ಹಾಗೂ ಸಾತ್ವಿಕ ಏಕರೂಪ ಇರುವಂಥ ನವಸಮಾಜ ಕಟ್ಟುವ ಕಾರ್ಯವನ್ನು ಶ್ರೀ ಬಸವೇಶ್ವರರು ಯಾವ ರೀತಿಯಲ್ಲಿ ಪ್ರಯತ್ನಪಟ್ಟಿದ್ದರು ಎಂಬುದನ್ನು ಸ್ಪಷ್ಟಿಕರಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ಸಾಮಾಜಿಕ ದೃಷ್ಟಿಯಿಂದ ಇದೊಂದು ಮಹತ್ವಪೂರ್ಣ ಕೃತಿಯಾಗಿ ಹೊರ ಬಂದಿದೆ.[೧]

## ೬.೬) ಎದೆಹಾಲು :

ಶ್ರೀ ಈಶ್ವರ ಕಾಪಸೆಯವರು ರಚಿಸಿದ ತ್ರಿಪದಿಗಳ ಸಂಗ್ರಹದ "ಎದೆಹಾಲು" ಎಂಬ ಕಿರುಹೊತ್ತಿಗೆಯು ತುಂಬಾ ಮೌಲ್ಯಯುತವಾಗಿದೆಂದು ಹೇಳಬಹುದು ಇಲ್ಲಿ ನೆನಪಿಸಿಕೊಳ್ಳುವ ವಿಷಯವೆಂದರೆ ಹಿಂದಿನ ಕಾಲದಲ್ಲಿನ ಹಳ್ಳಿಯ ಜನರು ತಮ್ಮ ತ್ರಿಪದಿಯ ಮೂಲಕ ಯಾವ ರೀತಿಯಲ್ಲಿ ತಮ್ಮ ಮನಸ್ಸಿನ ಭಾವನೆಯನ್ನು ಹಿಡಿದಿಡುತ್ತಿದ್ದರು ಎಂಬುದನ್ನು ಈಶ್ವರ ಕಾಪಸೆ ಯವರು ತಮ್ಮ ತ್ರಿಪದಿಯ ಮೂಲಕ ಜನರಿಗೆ ತಿಳಿಸಲು ಪ್ರಯತ್ನ ಪಟ್ಟಿದ್ದಾರೆ. ಹಳ್ಳಿಯ ಜನಪದರ ನಡುವೆಯೇ ಇವರು ಬೆಳೆದುದರಿಂದ ಈ ತ್ರಿಪದಿಯಲ್ಲಿ ತಮ್ಮಮ ಅನುಭವಗಳಿಗೆ ವಿವಿಧ ರೂಪಗಳನ್ನು ಕೊಟ್ಟಿದ್ದಾರೆಂಬುದನ್ನು ಈ ಕೃತಿಯಿಂದ ತಿಳಿಯಬಹುದು.

ಇಪ್ಪತ್ತೈದು ಕವಿತೆಗಳನ್ನು ಹೊಂದಿರುವ ಸಂಕಲನವು ವೈವಿಧ್ಯಮಯದಿಂದ ಕೂಡಿದೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ಅಂದರೆ ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ ವ್ಯಕ್ತಿಗತವಾದ ಕವಿತೆ, ಚರಣ, ರಚನೆಯನ್ನು ಮಾಡಿದ್ದಾರೆ. ಹಾಗೆಯೇ ಪ್ರೀತಿಗೆ, ರಾಜಕಾರಣಿಗಳಿಗೆ, ಸತ್ಸಂಗ ಚಟಗಳು, ಬ್ರಹ್ಮಚರ್ಯ, ಯೋಗಾಸನ ಹೀಗೆ ಹತ್ತು ಹಲವು ವಿಷಯಗಳನ್ನು ಕುರಿತು ತಮ್ಮ ಅನುಭವಕ್ಕೆ ಅಭಿವ್ಯಕ್ತಿಯನ್ನು ಕೊಟ್ಟಿದ್ದಾರೆ. ಇಲ್ಲಿ ನಾವು ಸ್ಮರಿಸಬೇಕಾದ ವಿಷಯವೇನೆಂದರೆ ಈಶ್ವರ ಕಾಪಸಿಯವರು ವ್ಯಕ್ತಿಗತವಾದ ತ್ರಿಪದಿಗಳನ್ನು ರಚನೆಯನ್ನ ಮಾಡುವಾಗ ಆಯಾ ವ್ಯಕ್ತಿಗಳನ್ನು ಅತ್ಯಂತ ಸಮೀಪದಿಂದ ನೋಡಿರುವುದರಿಂದ ಅವರ ಗುಣ ಸ್ವಭಾವಗಳನ್ನು ನೈಜ ಸ್ಥಿತಿಯಲ್ಲಿ ಚಿತ್ರಿಸಿದ್ದಾರೆ. "ಕಣ್ಣಿಲ್ಲದವರಿಗೆ ನೀನೆ ಶಿವಾ" ಎಂಬ ಶಿರ್ಷಿಕೆಯ ಅಡಿಯಲ್ಲಿ ಒಂದು ಸೊಗಸಾದ ಕವಿತೆಯ ಚರಣಗಳನ್ನು ನೋಡಬಹುದು.

"ಎಡಬಿಡದೆ ದುಡಿಯುವ ಕಡುನಿಷ್ಠೆ ಗುಣದವಗ
ದೃಡವಾದ ಮನಸ್ಸು ಕಂಡವಗ! ಸರಸೋತಿ
ಒಡನೆ ಒಲಿದಾಳ ಕೈಗುಣಕ॥"
(ಕಣ್ಣಿಲ್ಲದವರಿಗೆ ನೀನೆ ಶಿವಾ॥ ೭ ನೇ ಚರಣದಲ್ಲಿ ಪುಟ– ೩)

---

೧. "ಬದುಕಲು ಇದೊಂದೇ ದಾರಿ" ಲೇಖಕರು ಕೃಭಾ ಪಡಕೆ ೧೯೯೮ ರಲ್ಲಿ ವಿಮೋಚನಾ ಸಂಘ ಅಥಣಿ.

ಇಲ್ಲಿ ಒಬ್ಬ ವ್ಯಕ್ತಿಯ ಒಳ್ಳೆಯ ಗುಣಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಹೀಗೆ ಕಾಪಸೆಯವರು ವ್ಯಕ್ತಿಗತವಾದ ಕವಿತೆಗಳನ್ನು ತುಂಬಾ ವಿಶಾಲವಾಗಿ ಚಿತ್ರಿಸಿದ್ದಾರೆ. ಕವಿ ಕಾಲಮಾನಕ್ಕೆ ತಕ್ಕಂತೆ ಸ್ಪಂದಿಸಬೇಕು ಎನ್ನುವ ಮಾತು ಶತಕಾಲ ಸತ್ಯವಾದ ಸಂಗತಿ. ತನ್ನ ಸುತ್ತಮುತ್ತಲಿನ ಘಟನೆ– ಸನ್ನಿವೇಶಗಳಿಗೆ ತುಡಿಯಬೇಕೆಂಬುದನ್ನು ಅರಿತಿರುವ ಈಶ್ವರ ಕಾಪಸೆಯವರು ಇಂದಿನ ದಿನಮಾನದಲ್ಲಿ ಎಂತಹ ಅನಾಹುತಕಾರಕ ರೋಗಗಳಿಗೆ ಜನರು ತುತ್ತಾಗುತ್ತಿದ್ದಾರೆ ಎಂಬುದನ್ನು ಕಾಪಸೆಯವರು ತಮ್ಮ ತ್ರಿಪದಿಗಳ ಚರನಗಳ ಮೂಲಕ ಜನರಿಗೆ ತಿಳಿಸಲು ಪ್ರಯತ್ನಪಟ್ಟಿದ್ದಾರೆ. ಏಡ್ಸ್ ಎಂಬ ಮಹಾಮಾರಿಯನ್ನು ಕುರಿತು ತಮ್ಮ ತ್ರಿಪದಿಗಳಲ್ಲಿ ಹೀಗೆ ಹೇಳುತ್ತಾರೆ.

ಕಡಿಮೆ ಬೇಡಿಕೆ ಇರಲಿ ದುಡಿಮೆ ಹೆಚ್ಚಾಗಿರಲಿ (ಏಡ್ಸ್‌ವನ್ನು ಓಡಿಸಿ ನಮ್ಮಿಂದ ಹಿಡಿದ ಛಲ ಬಿಡದಿರಲಿ ಕಡೆತನ! ಕಾಮಕ್ಕೆ ೧೮ ನೇ ತ್ರಿಪದಿ ಪುಟ–೭ ರಲ್ಲಿ) ಕಡಿವಾಣ ವಿರಲಿ ಕಾಈಶ॥

ಪ್ರತಿಯೊಬ್ಬ ಮನುಷ್ಯ ರೋಗ ನಿರೋಧಕ ಶಕ್ತಿಯನ್ನು ಪಡೆದಿರಬೇಕು. ತನ್ನ ಬದುಕನ್ನು ಸುಂದರವಾಗಿ ರೂಪಿಸಿಕೊಳ್ಳಬೇಕಾದರೆ ಜೀವನವನ್ನು ಸ್ವಾರ್ಥಕತೆಯನ್ನು ಪಡೆಯಬೇಕಾದರೆ ಒಳ್ಳೆಯ ಆರೋಗ್ಯವನ್ನು ಹೊಂದಿರಬೇಕು ಎಂಬುದನ್ನು ಅರಿತುಕೊಂಡಿರುವ ಈಶ್ವರ ಕಾಪಸೆಯವರು ಯೋಗಾಸನವನ್ನು ಪ್ರತಿಯೊಬ್ಬರು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂಬುದನ್ನು ತಮ್ಮ ತ್ರಿಪದಿಯ ಮೂಲಕ  ಜನರಿಗೆ ತಿಳಿಸಲು ಪ್ರಯತ್ನ ಪಟ್ಟಿದ್ದಾರೆ.

ಯೌವ್ವನದ ವ್ಯವಸ್ಥೆಯಲ್ಲಿರುವ ಯುವಕರು ತಮ್ಮ ಪ್ರೀತಿಯ ಸೊಬಗನ್ನು ವೈವಿಧ್ಯಮಯದಿಂದ ಚಿತ್ರಿಸಿದ್ದಾರೆ. ಅದನ್ನು ಕವಿಯು ಹೇಳುವ ರೀತಿಯು ಅತ್ಯಂತ ಸೊಗಸಾಗಿದೆ. "ಕಲ್ಯಾ ಮಲ್ಲಿ"ಯಲ್ಲಿ ಪ್ರೀತಿಯಿಂದ ಮುತ್ತ ನೀಡುವಾಗ ಮೂಗೂತಿ ಮುರಿದೀತೆಂಬ ಭಯ ಮಲ್ಲಿಗಾದರೆ ಕಲ್ಯಾ ಯಾವ ರೀತಿಯಲ್ಲಿ ಹೇಳುತ್ತಾನೆ ಎಂಬುದನ್ನು ಈ ಕವಿತೆಯ ಸಾಲಿನಿಂದ ತಿಳಿಯಬಹುದು.

"ಮೂಗುತಿಗಿಂತಲೂ ಮೂಗು ಚೆಂದಾದೇಳ
ಮೂಗೀನ ತುದಿಯ ಸಿಟ್ಟೆಲ್ಲ! ತೆಗೆದಿಟ್ಟು
ಬಾಗಿ ನಿಮ್ಮವ್ನ ಕಾಲ್ಹಿಡಿಯ."
("ಕಲ್ಯಾ–ಮಲ್ಲಿ" ೧೯ ನೇ ಚರಣದಲ್ಲಿ ಪುಟ–೮ ರಲ್ಲಿ)

ಹಿರಿಯರ ಮುಂದೆ ಪ್ರೇಮ–ವಿವಾಹ ಮಾಡಿಕೊಳ್ಳಲು ತಯಾರಿಯಾದ ಈ ಇಬ್ಬರೂ ತರುಣ–ತರುಣಿಯರ ಆದರ್ಶ ಈ ಕಲ್ಯಾ–ಮಲ್ಲಿಯಲ್ಲಿ ಕಾಣುತ್ತೇವೆ.

"ಕಾಈಶ" ಕಾವ್ಯನಾಮದಿಂದ ಹೆಸರು ಮಾಡಿದ ಈಶ್ವರ ಕಾಪಸೆಯವರು "ಎದೆಹಾಲು" ಎಂಬ ಈ ಕಿರುಹೊತ್ತಿಗೆಯ ಮೂಲಕ ಜನರಿಗೆ ಉಣಬಡಿಸಿದ್ದಾರೆಂಬುದನ್ನು ಅರಿಯಬೇಕು.[೧]

---

೧. "ಎದೆಹಾಲು" ಲೇಖಕರು ಶ್ರೀ ಈಶ್ವರ ಕಾಪಸೆ ೧೯೯೭ ರಲ್ಲಿ ವಿಮೋಚನಾ ಸಮಗ ಅಥಣಿ.

## ೬.೭) ಕಾಪಾಡು ಕೂಡಲ ಸಂಗಮದೇವಾ :

ಶ್ರೀ ದು. ನಿಂ. ಬೆಳಗಲಿಯವರು ರಚಿಸಿದ "ಕಾಪಾಡು ಕೂಡಲ ಸಂಗಮದೇವಾ" ಎಂಬ ಮೌಲ್ಯಯುತವಾದ ಕೃತಿಯನ್ನು ವಿಮೋಚನಾ ಸಂಘ ಅಥಣಿಯವರು ೨೦೦೬ ರಲ್ಲಿ ತಮ್ಮ ಪ್ರಕಟಣೆಯ ೫೨ ನೇ ಕೃತಿಯಾಗಿ ಹೊರತಂದಿದ್ದಾರೆ.

ಈ ಕೃತಿಯು ಸಮಾಜದ ಆರೋಗ್ಯಕ್ಕೆ ಜನತೆಯ ಸ್ವಾಸ್ಥಕ್ಕೆ ಅಗತ್ಯವಾಗಿಬೇಕಾದ ವಿನೋದ ಸಾಹಿತ್ಯದ ಒಂದೇ ಒಂದು ಪ್ರತ್ಯೇಕವಾದ ಆವೃತ್ತಿಯನ್ನು ತಂದಿರಲಿಲ್ಲ ಆದರೆ ದು. ನಿಂ. ಬೆಳಗಲಿ ಅವರು ಬರೆದ ನಗೆ ಬರಹಗಳನ್ನು ಅತ್ಯಂತ ಸುಂದರವಾಗಿ ಚಿತ್ರಿಸಿದ್ದಾರೆ. ಯಾವುದೇ ವ್ಯಕ್ತಿಯು ನಗುವನ್ನು ಇಷ್ಟಪಡಲಾರದೇ ಇರಲಾರ. ಅಳುವಿನ ನಗುವಿನ ಸಂಕೋಲೆಯೇ ಈ ಜೀವನವೆಂಬುದು ಅಷ್ಟೇ ಸತ್ಯವಾದ ಸಂಗತಿ ನಗು ಮನುಷ್ಯನ ಆರೋಗ್ಯಕ್ಕೆ ಅತೀ ಅಗತ್ಯವಾದ ನೈಸರ್ಗಿಕ ಔಷಧಿ "ಸರ್ವೇ ಜನಾಃ ಸುಖಿನೋ ಭವಂತು" ಎಂಬ ಸಿದ್ಧಾವನೆಯಿಂದ ಅದ್ಭುತವಾದ ಕೃತಿಯನ್ನು ದು. ನಿಂ. ಬೆಳಗಲಿಯವರು ಹೊರತಂದಿದ್ದಾರೆ.

ನಾವು ಇನೊಬ್ಬರಿಗೆ ಮಾಡಬಹುದಾದ ಮೊಟ್ಟ ಮೊದಲನೆಯ ಹಾಗೂ ಕಟ್ಟ ಕಡೆಯ ಉಪಕಾರವೆಂದರೆ ಅವರ ಮುಖದಲ್ಲಿ ಒಂದಿಷ್ಟು ನಗುವನ್ನು ಮೂಡಿಸುವುದು. ಯಾಕೆಂದರೆ ನಗುವ ಮುಖದಷ್ಟು ಸುಂದರ ಮುಖ ಈ ಜಗತ್ತಿನಲ್ಲಿಯೇ ಇಲ್ಲ. ನಗುವ ಮುಖ ದೇವತೆಯ ಮುಖ! ನಾವು ಪಕ್ಕನೆ ಮನಬಿಚ್ಚಿ ನಕ್ಕಾಗ ನಮ್ಮ ಮನಸ್ಸಿನಲ್ಲಿರುವ ದುಗುಡ ದುಮ್ಮಾನಗಳು ದೂರಾಗುತ್ತವೆಂಬ ನಂಬಿಕೆಯಿಂದ ಆ ನಿಟ್ಟಿನಲ್ಲಿ ಲೇಖಕರು ಜನರ ಮನಸ್ಸನ್ನು ಶುದ್ಧ ಮಾಡುವ ಸಲುವಾಗಿ ಒಂಬತ್ತು ವಿನೋದ ಕಥಾ ರೂಪಕಗಳನ್ನು ಜನರಿಗೆ ಉಣಬಡಿಸಿದ್ದಾರೆ.

ಡಾ. ಕೆ. ಎಂ. ಮರಗೂಳಿ ಯವರ ವಿನೋದ ಸಾಹಿತ್ಯದಲ್ಲಿ ಲೇಖಕರು ಅಪ್ಪಟ ಗ್ರಾಮೀಣ ಭಾಷೆಯಲ್ಲಿ ನಿರೂಪಿಸಿದ್ದಾರೆ ಅದರ ಒಂದು ತುನುಕು ಇಲ್ಲಿದೆ ನೋಡಿ– "ಎಲಾ ಇದೇನು? ಬಾಳ ಇಲ್ಲಿ ...." ಎಂದು ದ್ವನಿ ಎತ್ತರಿಸಿ ಕೂಗಿದರೂ. ಅಡುಗೆ ಮನೆಯಲ್ಲಿ ಪಾತ್ರಗಳ ದಡಬಡ ಸಪ್ಪಳದ ಜತೆ ಬಳೆಗಳ ನಿನಾದವೂ ಟಂಟಣಿಸಿತ್ತು (ಪುಟ ೧ ರಲ್ಲಿ) ಹೀಗೆ ಜಾನಪದಿಯ ಮಾತುಗಳಿಂದ ಹಾಸ್ಯ ಪ್ರಧಾನವಾಗಿ ಚಿತ್ರಿಸಿದ ರೀತಿಯು ತುಂಬಾ ಮನೋಹರವಾಗಿದೆ. "ಮೂರು ಗಾಲಿಯ ಮಹಾರಥ ಟೆಂಪೂ" ಕಥಾನಕದಲ್ಲಿ ವಿನೂತನವಾಗಿ ವಿವರಣೆ ನೀಡಿದ್ದಾರೆ. ಹಿಂದಿನ ಕಾಲದಲ್ಲಿ ದೇವಮಾನವರು ಯಾವ ರೀತಿಯಲ್ಲಿ ಪುಷ್ಪಕ ವಿಮಾನಗಳನ್ನು ಬಳಸಿ ಸಂಚಾರವನ್ನು ಮಾಡುತ್ತಿದ್ದರೋ ಅದೇ ರೀತಿಯಲ್ಲಿ ಆಧುನಿಕ ಯುಗದಲ್ಲಿ ಮೂರು ಗಾಲಿಯ ರೀಕ್ಷಾಗಳನ್ನು ಇಂದು ಪುಷ್ಪಕ ವಿಮಾನದಂತೆ ಕಾರ್ಯನಿರ್ವಹಿಸುತ್ತಿವೆ ಎಂಬುದನ್ನು ಲೇಖಕರು ವಿನೂತನವಾಗಿ ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಈ ಕಥಾ ರೂಪಕದಲ್ಲಿಯ ತುಣಕನ್ನು ನಾವು ನೋಡಬಹುದು. ಅದು ರೀಕ್ಷಾ ಬಗ್ಗೆ ಬರೆದ ಹಾಸ್ಯ ಬರಿತವಾದ ಸಾಲುಗಳನ್ನು ನಾವು ಕಣ್ಣಾಡಿಸಬಹುದು.

"ಆಕಸ್ಮಿಕ ನಿಮಗೆ ನಡುದಾರಿಯಲ್ಲಿ ಒಂದಕ್ಕೆ ಬಂದರೂ ತೊಂದರೆಯಿಲ್ಲ. ಟೆಂಪೂರಾಣಿ ಹಾಗೇ ಕುಣಿಯುತ್ತ ಕುಲುಕುತ್ತ ಕಥಕಲಿ ನೃತ್ಯಗಾತಿಯಂತೆ ನಡದೇ ಇರುತ್ತಾಳೆ" (ಪುಟ-೧ ರಲ್ಲಿ) ಹೀಗೆ ಹಾಸ್ಯಭರಿತವಾದ ಸಾಲುಗಳಿಂದ ಒಂದೊಂದು ಹೊಸ ಅನುಭವವನ್ನು ಪ್ರಯಾಣಿಕರಿಗೆ ನೀಡಿದ್ದಾರೆ. "ತಲೆನೋವು ಹಾಗೂ ಔಷಧಿಗಳು" ಈ ಕಥಾನಕದಲ್ಲಿ ತಲೆನೋವಿಗೆ ನೂರೆಂಟು ಕಾರಣಗಳಿರಬಹುದು. ಆದರೆ ಇದು ಸರ್ವಸಾಮಾನ್ಯವಾಗಿ ಎಲ್ಲರ ಅನುಭವಕ್ಕೆ ಬರುವ ವಿಚಾರ. ಇದು ತಲೆಯಿದ್ದವರ ತಲೆಯನ್ನು ಆವರಿಸಿದಂತೆ ತಲೆಯಿಲ್ಲದವರ ತಲೆಯನ್ನು ತಿನ್ನದೇ ಬಿಡದು" ಎಂಬ ಸುಂದರವಾದ ವಿಮರ್ಶಾತ್ಮಕವಾದ ಸಾಲುಗಳನ್ನು ಲೇಖಕರು ಹಾಸ್ಯಬರಿತವಾಗಿ ಈ ಕೃತಿಯಲ್ಲಿ ಚಿತ್ರಿಸಿದ್ದಾರೆ.[೧]

### ೬.೮) ಸೂರ್ಯ ನಮಸ್ಕಾರ :

ನಿವೇದನೆಯಲ್ಲಿ ಲೇಖಕರು ತಮ್ಮ ಮನದಾಳದ ಮಾತುಗಳನ್ನು ಅತ್ಯಂತ ಸೋಗಸಾಗಿ ನಿವೇದಿಸಿದ್ದಾರೆ. ಇಂದಿನ ದಿನಮಾನಗಳಲ್ಲಿ ಮನುಷ್ಯನಿಗೆ ಆರೋಗ್ಯವು ಎಷ್ಟು ಅವಶ್ಯ ಎಂಬುದನ್ನು ತಿಳಿಹೇಳಿದ್ದಾರೆ. ಪ್ರತಿಯೊಬ್ಬರು ತಮ್ಮ ಆರೋಗ್ಯದ ಕಡೆಗೆ ಗಮನಹರಿಸಿದರೆ ಒಂದು ಸದೃಢವಾದ ಸಮಾಜ ನಿರ್ಮಾಣ ಮಾಡುವುದು ಎಂಬುದು ಅವರ ಅಭಿಮತವಾಗಿದೆ.

"ಸದೃಢ ಶರೀರದಲ್ಲಿ ಸದೃಢ ಮನಸ್ಸು" ಎಂಬುದನ್ನು ಎಲ್ಲ ವರ್ಗದ ಜನರು ಅರೀಯಬೇಕು ಅಂದರೆ ಸರ್ವಾಂಗೀಣ ಪ್ರಗತಿಗಾಗಿ ಮಕ್ಕಳು ಸಹಯೋಗವನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂಬುದು ಲೇಖಕರ ಮಾತಾಗಿದೆ. ಪ್ರಾಥಮಿಕ ಹಂತದಿಂದಲೇ ಪ್ರತಿಯೊಂದು ಮಗುವಿಗೆ ಯೋಗ ತರಬೇತಿಯನ್ನು ನೀಡಿದರೆ ಮಕ್ಕಳು ಸರ್ವಾಂಗೀಣವಾಗಿ ಬೆಳೆಯಲು ಸಹಕರಿಸಿದಂತಾಗುತ್ತದೆ. ಆದ್ದರಿಂದ ಪ್ರತಿಯೊಂದು ಮಗುವಿಗೆ ಯೋಗದ ಜ್ಞಾನವನ್ನು ಅವಶ್ಯವಾಗಿ ನೀಡಬೇಕೆಂಬುದು ಲೇಖಕರ ಆಶಯವಾಗಿದೆ.

ಇಂದಿನ ವ್ಯವಹಾರಿಕ ಪ್ರಪಂಚದಲ್ಲಿ ಎಲ್ಲರೂ ಬಿಡವಿಲ್ಲದ ಕೆಲಸ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಹೀಗಾಗಿ ಯಾರಿಗೂ ಯೋಗಗಳ ಬಗ್ಗೆ ಗಮನ ಹರಿಸಲು ಸಾಧ್ಯವಾಗದಾಗಿದೆ. ಆರೋಗ್ಯದ ಕಡೆಯು ಯೋಚನೆ ಮಾಡಲು ಸಮಯವಿಲ್ಲದಷ್ಟು ಜನ ವ್ಯವಹಾರಿಗಳಾಗಿದ್ದಾರೆಂದು ಲೇಖಕರು ವಿಷಾದ ವ್ಯಕ್ತಪಡಿಸುತ್ತಾರೆ. ಇಂದಿನ ಯುಗದಲ್ಲಿ ಎಲ್ಲರು ಸತ್ವರಹೀತವಾದ ಆಹಾರ, ವಿಶ್ರಾಂತಿಯಿಲ್ಲದ ದುಡಿಮೆ ಕಲುಷಿತವಾದ ಪರಿಸರ ಇಂತಹ ಕೆಲಸ ಕಾರ್ಯಗಳ ಮಧ್ಯ ಬಿಡುವನ್ನು ಮಾಡಿಕೊಂಡು "ಸೂರ್ಯ ನಮಸ್ಕಾರ" ಸರಳ ಯೋಗವನ್ನು ಪ್ರತಿಯೊಬ್ಬರು ಅನುಸರಿಸಬೇಕೆಂದು ಲೇಖಕರ ಅಭಿಮತವಾಗಿದೆ. ತಮ್ಮ ಅಭಿಮತವನ್ನು ವ್ಯಕ್ತಪಡಿಸುತ್ತಾ ಸರಳವಾಗಿ ಯೋಗವನ್ನು ಯಾವ ಯಾವ ಆಸನದಲ್ಲಿ ಕೈಗೊಳ್ಳಬೇಕು ಮತ್ತು ಅವುಗಳನ್ನು ನಿತ್ಯ ಮಾಡುವುದರಿಂದ ಯಾವ ಯಾವ ಲಾಭಗಳಿವೆ ಎಂಬುದನ್ನು ಸವಿವರವಾಗಿ "ಸೂರ್ಯ ನಮಸ್ಕಾರ" ಪುಸ್ತಕದಲ್ಲಿ ವಿವರಿಸಿದ್ದಾರೆ.

---

೧. "ಕಾಪಾಡು ಕೂಡಲ ಸಂಗಮದೇವಾ!" ಲೇಖರು ದು. ನಿಂ. ಬೆಳಗಲಿ ೨೦೦೬ ರಲ್ಲಿ ವಿಮೋಚನಾ ಸಂಘ ಅಥಣಿ.

ಒಬ್ಬ ವ್ಯಕ್ತಿಯು ಶಾರೀರಿಕವಾಗಿ, ಮಾನಸಿಕವಾಗಿ, ಸಾಮಾಜಿಕವಾಗಿ ಬೆಳೆಯಬೇಕಾದರೆ ಆರೋಗ್ಯ ಶಿಕ್ಷಣವು ಅತೀ ಅವಶ್ಯಕ. "ಏಳಿ ಎದ್ದೇಳಿ ಗುರಿ ಮುಟ್ಟುವ ತನಕ ನಿಲ್ಲದಿರಿ" ಎಂಬ ಸ್ವಾಮಿ ವಿವೇಕಾನಂದರ ವಾಣಿಯಂತೆ ಪ್ರತಿಯೊಬ್ಬರು ತಮ್ಮ ಗುರಿಯನ್ನು ಮುಟ್ಟಬೇಕಾದರೆ ಅವರಲ್ಲಿ ಹುರುಪು, ಹುಮ್ಮಸ್ಸು ಅತ್ಯಂತ ಅವಶ್ಯಕ. ಆ ಹುರುಪು ಹುಮ್ಮಸ್ಸು ಬರಬೇಕಾದರೆ ಆರೋಗ್ಯ ಶಿಕ್ಷಣದ ಕಡೆಗೆ ಅದರಲ್ಲಿಯೂ ಯೋಗ ಶಿಕ್ಷಣದ ಕಡೆಗೆ ಹೆಚ್ಚು ಮಹತ್ವವನ್ನು ನೀಡಬೇಕು. ಅದು ಅಲ್ಲದೇ ವೈಜ್ಞಾನಿಕವಾದ ಕಾರಣಗಳನನು ನೀಡುತ್ತಾ ಪ್ರತಿಯೊಬ್ಬ ವ್ಯಕ್ತಿ ಎಂಬುದನ್ನು ಎಂತಹ ಸರಳವಾದ ಯೋಗಗಳನ್ನು ಮಾಡಬಹುದು ಎಂಬುದನ್ನು ಲೇಖಕರು ಈ ಕೆಳಗಿನಂತೆ ಹೇಳುತ್ತಾರೆ. ಅವುಗಳು ಪ್ರತಿಯೊಬ್ಬರ ಜೀವನದಲ್ಲಿ ಅವಶ್ಯವಾಗಿ ಮಾಡಬಹುದಾದ ಸರಳ ವ್ಯಾಯಾಮಗಳು ಇವುಗಳಾಗಿವೆ.

ಸೂರ್ಯ ನಮಸ್ಕಾರವನ್ನು ಪ್ರಾರಂಭಿಸುವ ಮುನ್ನ ಈ ಪ್ರಾರ್ಥನೆಯೊಂದಿಗೆ ಪ್ರಾಂಭಿಸಬೇಕು ಅಂದಾಗ ಮನಸ್ಸು ಕೂಡಾ ಹಗುರವಾಗಿ ನಿರ್ಮಲ ಮನಸ್ಸು ಬೇರುರುತ್ತದೆ.

"ಓಂ ಅಸತೋಮಾ ಸದ್ಗಮಯ
ತಮಸೋಮಾ ಜೋತಿರ್ಗಮಯ್
ಮೃತ್ಯೋರ್ಮಮ್ ಅಮೃತಂಗಮಯ್
ಓಂ ಶಾಂತಿ ಶಾಂತಿ ಶಾಂತಿಃ"

ಎಂಬ ದೇವರ ನಾಮ ಸ್ಮರಣೆಯಿಂದ ಯೋಗಗಳನ್ನು ಪ್ರಾರಂಭಿಸಬೇಕು.

೧) ಸಮಸ್ಥಿತಿ (ತಾಡಾಸನ)
೨) ಉರ್ಧ್ವಾಸನ
೩) ನಮಸ್ಕಾರಾಸನ
೪) ಹಸ್ತ ಪಾದಾಸನ
೫) ಏಕಪಾದ ಪ್ರಸರಣಾಸನ
೬) ದ್ವಿಪಾದ ವಿಸ್ತಾರಣಾಸನ
೭) ಶಶಾಂಕಾಸನ
೮) ಸಾಷ್ಟಾಂಗ ಪ್ರಣಿಪಾತಾಸನ
೯) ಭುಗಂಗಾಸನ
೧೦) ಭೂದರಾಸನ

"ಸೂರ್ಯ ನಮಸ್ಕಾರ" ಎಂಬ ಕಿರು ಹೊತ್ತಿಗೆಯಲ್ಲಿ ೧೦ ಆಸನಗಳ ಬಗ್ಗೆ ಸವಿಸ್ತಾರವಾಗಿ ವಿವರಿಸಿದ್ದಾರೆ. ಪ್ರತಿಯೊಂದು ಆಸನದ ಲಾಭ ಯಾವ ರೀತಿಯಲ್ಲಿ ಪಡೆಯಬಹುದು ಎಂಬುದನ್ನು ಲೇಖಕರು ವಿವರಿಸಿದ್ದಾರೆ.

## ೬.೯) ಶರಣ ಪ್ರಕಾಶ :

ಸಮಾಜದಲ್ಲಿರುವ ಅನಿಷ್ಟಗಳನ್ನು ಹೋಗಲಾಡಿಸಲು ವರ್ಣಬೇಧವನ್ನು ತೊಡಗಿಸಲು ಹಿಂದಿನ ಕಾಲದಲ್ಲಿ ಮಹಾತ್ಮರು ಯಾವ ರೀತಿಯಲ್ಲಿ ಹೋರಾಟವನ್ನು ಕೈಗೊಂಡರು ಹಾಗೂ ಸಮಾಜದ ಕಂದಾಚಾರವನ್ನು "ಶರಣ ಪ್ರಕಾಶ" ಕಿರುಹೊತ್ತಿಗೆಯು ಸ್ವಲ್ಪದರಲ್ಲಿಯೇ ಅದರ ವಿವರಣೆಯನ್ನು ಜನರ ಮನಸ್ಸಿಗೆ ಮುಟ್ಟುವಂತೆ ವಿವರಣೆಯನ್ನು ನೀಡಿದ್ದಾರೆ.

ಹಿಂದಿನ ಕಾಲದಲ್ಲಿ ಎಲ್ಲ ವರ್ಗದ, ಎಲ್ಲ ಬಗೆಯ ಜನಸಾಮಾನ್ಯರ ಉದ್ದಾರದ ಕಾರ್ಯ ಕೈಕೊಂಡವರಲ್ಲಿ ಮೊದಲಿಗರು ಬುದ್ದ. ಅವರು ಸಮಾಜದ ಜನರಿಗೆ ತಮ್ಮ ತತ್ವ ಆದರ್ಶಗಳ ಜ್ಞಾನ ಸುಧೆಯನ್ನು ಹರಿಸಿ ಜನರ ಮನಸ್ಸಿನಲ್ಲಿರುವ ಅನಿಷ್ಟಗಳನ್ನು ಹೋಗಲಾಡಿಸಲು ಪ್ರಯತ್ನಿಸಿದವರು. ತದನಂತರ ಸಮಾಜದ ಉದ್ದಾರದ ಕಾರ್ಯ ಕೈಕೊಂಡವರು. ವಿಭೂತ ಪುರುಷ ಬಸವಣ್ಣನವರೇ ಎಂಬುದು ಸತ್ಯವಾದ ಸಂಗತಿ ಅಂದಿನ ಕಾಲದಲ್ಲಿ ಧರ್ಮದ ಹೆಸರಿನಲ್ಲಿ ಮುಖವಾಡ ಹಾಕಿಕೊಂಡು ಅನೇಕ ವ್ಯಕ್ತಿಗಳು ಜನರ ಶೋಷಣೆಯನ್ನು ಮಾಡುತ್ತಿದ್ದರು. ಅಂತಹ ಒಂದು ಧರ್ಮಾಂದತೆಯ ನಡುವೆಯೇ ಬಸವಣ್ಣನವರು ಅಂತಹವರ ಮುಖವಾಡ ಕಳಚಲು ಸಾಕಷ್ಟು ಪ್ರಯತ್ನಪಟ್ಟರು ಎಂಬುದನ್ನು ದು. ನಿಂ. ಬೆಳಗಲಿ ಯವರು ತಮ್ಮ ಕಿರುಹೊತ್ತಿಗೆಯಲ್ಲಿ ವಿವರಣೆಯನ್ನು ನೀಡಿದ್ದಾರೆ.

ಬಸವಣ್ಣನವರು ಯಾವ ರೀತಿಯಲ್ಲಿ ಸಮಾಜ ಸುಧಾರಣೆಯನ್ನು ಕೈಗೊಂಡರು ಎಂಬುದು ಮುಖ್ಯವಾದ ಸಂಗತಿ ಅಷ್ಟೇ ಅಲ್ಲಾ. ಯಾವ ಮಾರ್ಗ ಹಿಡಿದು ಸುಧಾರಣೆಯ ಕಾರ್ಯ ಕೈಗೊಂಡರು. "ಅನುಭವ ಮಂಟಪ" ಎಂಬ ಅನುಭಾವಿ ವ್ಯಕ್ತಿಗಳ ಸಂಘಟನೆಯನ್ನು ಮಾಡಿಕೊಂಡು ಅವರ ಮುಖಾಂತರ ಸಮಾಜ ಸುಧಾರಣಾ ಕಾರ್ಯದಲ್ಲಿ ಬಸವಣ್ಣನವರು ತೊಡಗಿದರು. ೧೨ ನೇ ಶತಮಾನದಲ್ಲಿ ಅನೇಕ ರೀತಿಯಲ್ಲಿ ಜಾತಿ ವಾದಗಳು ಬೆಂಕಿಯ ಜ್ವಾಲೆಯಂತೆ ಇಡೀ ಸಮಾಜವನ್ನು ಸುಟ್ಟು ಹಾಕುವ ಹಂತದಲ್ಲಿದ್ದವು. ಅಂತಹ ಸಂದರ್ಭದಲ್ಲಿ ಬಸವಣ್ಣನವರು ಸಮಾಜದಲ್ಲಿ ಯಾರು ಮೇಲು ಅಲ್ಲಾ ಯಾರು ಕೀಳು ಅಲ್ಲಾ, ಎಲ್ಲರು ಸಮಾನರು ಎಂಬುದನ್ನು ಜನರಿಗೆ ತಿಳಿಹೇಳಲು ಪ್ರಯತ್ನಪಟ್ಟರು. ಅನುಭವ ಮಂಟಪದಿಂದ ಅನೇಕ ರೀತಿಯಿಂದ ಸಮಾಜದ ತೊಡಕುಗಳನ್ನು ಹಾಗೂ ಅನಿಷ್ಟಗಳನ್ನು ಹೋಗಲಾಡಿಸಲು ಪ್ರಯತ್ನಪಟ್ಟರು.

ಬಸವಣ್ಣನವರ ಅನುಭವ ಮಂಟಪದ ಕಲ್ಪನೆಗೆ ಹಾಗೂ ಅವರ ಕಾರ್ಯಕ್ಕೆ ಕೈಗುಡಿಸಿದ ಮಹತ್ವದ ವ್ಯಕ್ತಿಗಳಲ್ಲಿ ಮಾದರ ಚೆನ್ನಯ್ಯ ಹಾಗೂ ಡೋಹರ ಕಕ್ಕಯ್ಯ ಎಂಬುದು ಮಹತ್ವದ ಸಂಗತಿ ಎಂದು ಹೇಳಬಹುದು ಯಾಕೆಂದರೆ ಕೀಳು ಜಾತಿಯಲ್ಲಿ ಹುಟ್ಟಿದವರು ಸಹ ಅವರಲ್ಲಿ ಅನುಭವದ ಅಮೃತವನ್ನು ಕಂಡವರು ಬಸವಣ್ಣನವರು. ಇಂತಹ ಜೊತೆಗೂಡಿ ಅನುಭವದ ಮಂಟಪದ ಮುಖಾಂತರ ಅನೇಕ ಸಮಾಜ ಹಿತಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ನಾಡಿನ ಏಳಿಗೆಗಾಗಿ ಶ್ರಮಿಸಿದರು.

ಅನುಭವ ಮಂಟಪದಿಂದ ಅನೇಕ ಕ್ರಾಂತಿಕಾರಕ ಬದಲಾವಣೆಯನ್ನು ತರುವಲ್ಲಿ ಶ್ರಮಿಸಿದರು. ಎಲ್ಲ ಸ್ತರಗಳಲ್ಲಿರುವ ಜನರನ್ನೆ ಒಂದುಗುಡಿಸುವಲ್ಲಿ ಹಾಗೂ ಸಮಾಜದಲ್ಲಿನ ಕಂದಾಚಾರಗಳನ್ನು ಬದಿಗೊತ್ತುವಲ್ಲಿ ಅನುಭವ ಮಂಟಪವು ಸಮಾಜದಲ್ಲಿ ಬದಲಾವಣೆಯ ಕ್ರಾಂತಿಯನ್ನೆ ಮಾಡಿತು ಎಂಬುದನ್ನು ಲೇಖಕರು ಅತ್ಯಂತ ಮಾರ್ಮಿಕವಾಗಿ ವಿವರಿಸಿದ್ದಾರೆ.

"ಪತಿತೋದ್ಧಾರಕ ಶ್ರೀ ಬಸವೇಶ್ವರ" ಈ ಶಿರೋನಾಮದಡಿ ಲೇಖಕಿ ಮಾತೆ ವಾಗ್ದೇವಿಯವರು ಅತ್ಯಂತ ಸೊಗಸಾಗಿ ಬಸವಣ್ಣನವರ ಬಗ್ಗೆ ನಿರೂಪಣೆ ನೀಡಿದ್ದಾರೆ. ಬಸವೇಶ್ವರರು ಬ್ರಾಹ್ಮಣ ಪಂಡಿತ ಮಾದರಸನ ಮಗನಾಗಿ ಹುಟ್ಟಿ ತಾಯಿ ಮಾದಲಾಂಬಿಕೆಯ ಪ್ರೀತಿಯ ಕಂದನಾಗಿ ಅಕ್ಕ ನಾಗಮ್ಮಳ ಅಕ್ಕರೆಯ ತಮ್ಮನಾಗಿ ಬೆಳೆದವರು. ಶ್ರೀ ಬಸವೇಶ್ವರರು "ಬೆಳೆಯುವ ಸಿರಿ ಮೊಳಕೆಯಲ್ಲೇ" ಎಂಬಂತೆ ತನಗೆ ಒಪ್ಪಿಗೆಯಾಗದಂತ ಯಾವುದೇ ವಿಷಯ ಬಂದರು ಸಹ ಇವರು ಪ್ರತಿಭಟಿಸುತ್ತಿದ್ದರು. ವರ್ಗ, ವರ್ಣ, ಲಿಂಗ ಬೇಧಗಳಿಂದ ಕೂಡಿದ ಈ ಸಂಸ್ಕಾರ ನನಗೆ ಬೇಡವೆಂದು ಮನೆ ಬಿಟ್ಟು ಹೊರಗೆ ನಡೆದರು. ಸಮಾಜದಲ್ಲಿರುವ ಮೌಢ್ಯತೆ ಹಾಗೂ ಅಸಮಾನತೆಯನ್ನು ಕಂದಾಚಾರಗಳನ್ನು ಕಂಡು ಅವರ ಮನವ ಮುದುಡಿತು. ಅಷ್ಟೆ ಯಾಕೇ ಚಿಂತನೆಗೆ ತೊಡಗಿದರು. ಅಂದಿನ ಸಮಾಜ ವ್ಯವಸ್ಥೆಯು ಹೇಗಿತ್ತೆಂದರೆ ಯಾರು ಧಾರ್ಮಿಕ ನಿಯಮಗಳನ್ನು ಮೀರುವಂತಿರಲಿಲ್ಲ. ರಾಜರು ಹಾಕಿದ ಮಾತಿನ ಗೆರೆಯನ್ನು ದಾಟುವಂತಿರಲಿಲ್ಲ. ಎಲ್ಲ ನಿಯಮಗಳಿಗೆ ರಾಜನೇ ಆದಿ ಅಂತ್ಯ, ಎಲ್ಲವು ಅವರೇ ಆಗಿದ್ದರು. ಅಂತಹ ಜಟಿಲ ಸಮಸ್ಯೆಯ ಸಂದರ್ಭದಲ್ಲಿ ಬಸವಣ್ಣನವರು ಧೃಡ ನಿರ್ಧಾರ ತೆಗೆದುಕೊಳ್ಳುತ್ತಾರೆ.

ಯಾರ ಹಂಗೀಗೂ ಒಳಗಾಗದೇ ತನ್ನದೇ ಆದ ಧಾರ್ಮಿಕ ಮಂಟಪವನ್ನು ಕಟ್ಟಿಕೊಂಡು ಸಮಾಜದ ಜನರಲ್ಲಿರುವ ಮೌಢ್ಯವನ್ನು ಹೋಗಲಾಡಿಸಲು ಪ್ರಯತ್ನಿಸಿದವರು ಬಸವೇಶ್ವರರು.

ಕ್ರಾಂತಿವೀರರಾಗಿ ಹೋರಟ ಬಸವಣ್ಣ ಶಾಂತಿದೂತರಂತೆ ಕಾರ್ಯ ಸಾಧಿಸುತ್ತಿದ್ದರು. ಅದೇ ಕಾಲದಲ್ಲಿ ಇನ್ನೊಂದು ಸಮಾಜದ ಶೋಷಣೆಯೆಂದರೆ ಸ್ತ್ರೀ ಶೋಷಣೆ ದೇವರ ಹೆಸರಿನಲ್ಲಿ ಮಹಿಳೆಯರನ್ನು ವೈಶ್ಯಾ ವೃತ್ತಿಗೆ ತಳ್ಳುತ್ತಿದ್ದ ಜನರನ್ನು ತೀವ್ರವಾಗಿ ಖಂಡಿಸುವುದರ ಜೊತೆಗೆ ಅವರಿಗೆ ಸ್ವತಂತ್ರವಾಗಿ ಜೀವಿಸಲು ಅನುವ ಮಾಡಿಕೊಟ್ಟರು ಬಸವಣ್ಣನವರು. ತಮ್ಮ ತತ್ವ ಆದರ್ಶಗಳನ್ನು ಜನರಿಗೆ ತಿಳಿಹೇಳಿ ಜನರಲ್ಲಿರುವ ಮೌಢ್ಯ ಹಾಗೂ ಅಂದಕಾರವನ್ನು ನಿರ್ನಾಮ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದರು. ಅಂತಹ ಮಹಾನ ವ್ಯಕ್ತಿಯ ತತ್ವಗಳನ್ನು ಹಾಗೂ ಅವರ ಆದರ್ಶಗಳನ್ನು ಇಂದಿನ ಜನ ಸಮೂಹ ತಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಒಂದು ಉತ್ತಮವಾದ ಸಮಾಜ ನಿರ್ಮಾಣವಾಗುವುದರಲ್ಲಿ ಯಾವುದೇ ಸಂದೇಹವಿಲ್ಲವೆಂಬುವುದು ಮಾತೆ ವಾಗ್ದೇವಿಯವರ ಅಭಿಪ್ರಾಯವಾಗಿದೆ.[೧]

---

೧. ಶರಣ ಪ್ರಕಾಶ ಲೇಖಕರು ವ್ಹಿ. ಎಸ್. ಮನವಾಡೆ ೧೯೯೦ ರಲ್ಲಿ ವಿಮೋಚನಾ ಸಂಘ ಅಥಣಿ.

## ೬.೧೦) ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ :

"ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ" ಎಂಬ ಕಿರುಹೊತ್ತಿಗೆಯಲ್ಲಿ ಲೇಖಕರು ತಮ್ಮ ಅಭಿಪ್ರಾಯವನ್ನು ಜನರ ಮನಮುಟ್ಟುವಂತೆ ವಿವರಣೆ ಕೊಟ್ಟಿದ್ದಾರೆ. ಸಮಾಜದಲ್ಲಿ ಸ್ತ್ರೀಯರ ಪಾತ್ರ ಎಂತಹ ಮಹತ್ವವನ್ನು ಪಡೆದಿತ್ತು. ಅದು ಶಿವಶರಣರ ಪ್ರಕಾರ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನವನ್ನು ಕುರಿತು ಸ್ಪಷ್ಟವಾದ ಮಾಹಿತಿಯನ್ನು ಈ ಕಿರುಹೊತ್ತಿಗೆಯಿಂದ ತಿಳಿಸಲು ಲೇಖಕರು ಪ್ರಯತ್ನಪಟ್ಟಿದ್ದಾರೆ.

ಒಂದು ಸಮಾಜ ಜನಾಂಗ, ಸಂಸ್ಕೃತಿ, ಧರ್ಮ, ಸಾಹಿತ್ಯ ಒಟ್ಟಾರೆಯಾಗಿ ಪ್ರಗತಿಯನ್ನು ಸಾಧಿಸಬೇಕಾದರೆ ಆಂತರಿಕವಾಗಿ, ಬಾಹ್ಯವಾಗಿ ಸರ್ವತೋಮುಖ ಬೆಳವಣಿಗೆಯಾಗಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಗಂಡು-ಹೆಣ್ಣಿನ ಪಾತ್ರವು ಅತೀ ಅವಶ್ಯಕ. ಸಮಾಜ ನಿರ್ಮಾಣಕ್ಕೆ ಸಮಾಜದ ಪ್ರತಿಯೊಬ್ಬ ವ್ಯಕ್ತಿ ಬಡವ-ಬಲ್ಲಿದ, ಉಚ್ಛ-ನೀಚ ಎನ್ನದೆ, ಗಂಡು ಹೆಣ್ಣು ಇಬ್ಬರು ಹೆಗಲಿಗೆ ಹೆಗಲು ಕೊಟ್ಟು ನಿಂತಾಗ ಮಾತ್ರ ಒಂದು ಉತ್ತಮವಾದ ಸಮಾಜ ನಿರ್ಮಾಣವಾಗಲು ಸಾಧ್ಯವಿದೆ.

ಪ್ರತಿಯೊಬ್ಬ ಮನುಷ್ಯ ಜೀವಿಯು ಜಗತ್ತಿನ ಕಲ್ಯಾಣಕ್ಕೊಸ್ಕರ ತನ್ನಲ್ಲಿರುವ ಅಂದಕಾರವನ್ನು ತೋಡೆದು ಶಾಂತ ಸ್ವಭಾವದಿಂದ ಮುನ್ನಡೆಯಬೇಕಾದುದು ಅತ್ಯವಶ್ಯಕವಾಗಿದೆ. ಮನುಷ್ಯ ಮನುಷ್ಯನನ್ನು ಕರೆದುಕೊಂಡು, ಕೂಡಿಕೊಂಡು ಹೋಗುವುದರಲ್ಲಿಯೇ ನಾಗರೀಕತೆಯ ಶ್ರೇಯಸ್ಸು ಅಡಗಿದೆ ಎಂಬ ಲೇಖಕರ ಮಾತು ಮನಮುಟ್ಟುವಂತಿದೆ. ಆದ್ದರಿಂದ ಮನುಷ್ಯ ಸಂಘಜೀವಿಯಾದುದರಿಂದ ಆತ ಒಂಟಿಯಾಗಿ ಬದುಕಲಾರ. ಸ್ತ್ರೀ-ಪುರುಷನನ್ನು ಅವಲಂಬಿಸಬೇಕು. ಪುರುಷ-ಸ್ತ್ರೀಯರನ್ನು ಅವಲಂಬಿಸಬೇಕು. ಗಂಡು ಹೇಗೆ ಸಮಾಜದ ಅತೀ ಮುಖ್ಯ ಘಟಕವೋ, ಹಾಗೆಯೇ ಹೆಣ್ಣು ಕೂಡ ಸಮಾಜದ ಅತೀ ಮುಖ್ಯ ಘಟಕ ಎಂಬುದನ್ನು ಲೇಖಕರು ಈ ಕಿರುಹೊತ್ತಿಗೆಯಲ್ಲಿ ತಿಳಿಸಲು ಪ್ರಯತ್ನ ಪಟ್ಟಿದ್ದಾರೆ.

"ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದಂತೆ" ಎಂದು ಹೆಣ್ಣಿನ ಅವಶ್ಯಕತೆಯನ್ನು ಮನದಟ್ಟು ಮಾಡಿದ್ದಾರೆ. ಅದೇ ರೀತಿಯಾಗಿ ಪುರುಷರ ಅವಶ್ಯಕತೆಯನ್ನು ಲೇಖಕರು ಕಡೆಗಣಿಸಿಲ್ಲ. ಪುರುಷರ ಬಗ್ಗೆ ಹೀಗೆ ಹೇಳುತ್ತಾರೆ. "ಪುರುಷನಿಲ್ಲದವಳ ಬಾಳುವೆ ನೋರೊಳಕ್ಷರವ ಬರೆದಂತೆ" ಎಂಬುದನ್ನು ಪುರುಷರ ಮಹತ್ವವನ್ನು ವಿವರಿಸಿದ್ದಾರೆ. ಆದ್ದರಿಂದ ಶಿವಶರಣರ ದೃಷ್ಟಿಯಲ್ಲಿ ಸ್ತ್ರೀಗೆ ಎಷ್ಟೊಂದು ಮಹತ್ವ ನೀಡಿದ್ದಾರೆಯೋ ಅದೇ ರೀತಿಯಾಗಿ ಪುರುಷನಿಗೂ ಕೂಡಾ ಕೊಟ್ಟಿದ್ದಾರೆ. ಒಟ್ಟಾರೆಯಾಗಿ ಈ ಕಿರುಹೊತ್ತಿಗೆಯು ಸಮಾಜದ ದೃಷ್ಟಿಯಿಂದ ಅತ್ಯಂತ ಮಹತ್ವದ ಕೃತಿಯಾಗಿದೆ.

## ೬.೧೧) ಉದರೋಪನಿಷತ್ :

"ಶ್ರೀಯುತ ಮಲ್ಲಿಕಾರ್ಜುನ ಹುಲಿಗಬಾಲಿ"ಯವರು ರಚಿಸಿರುವ ಉದರೊಪನಿಷತ್ ಈ ಕೃತಿಯನ್ನು ವಿಮೋಚನಾ ಸಂಘ ಅಥಣಿಯವರು ತಮ್ಮ ೩೩ನೇ ಆವೃತ್ತಿಯಾಗಿ ಹೊರತಂದಿದ್ದಾರೆ.

ಈ ಕೃತಿಯನ್ನು ಓದುವವರು ಬರಿ ಕಣ್ಣೀರು ಸುರಿಸುವುದು ಬೇಡವೆಂದು, ಕುಮಾರವ್ಯಾಸ ಉತ್ತರ ಕುಮಾರನ ಪಾತ್ರದ ಮೂಲಕ ಸಹೃದಯರಿಗೆ ಆಗಬಹುದಾದ ಅಳಲನ್ನು ಅಳಿಸಿ, ನಗೆಯ ರಸದೂಟವನ್ನು ಉಣಬಡಿಸಿದ್ದಾರೆ. ಆದ್ದರಂದ ಸುಖ-ದುಃಖ ಇರದಿದ್ದರೆ. ಮನುಷ್ಯ ಬದುಕುವುದು ಸಾದ್ಯವೇ ಹೇಗೆ? ಎಂಬುವದನ್ನು ವಿನೂತನ ಕೈಯಲ್ಲಿ ನೋಡಬಹುದು. ಸುಖವನ್ನಾಗಲಿ, ನಗೆಯನ್ನಾಗಲಿ ಬರಮಾಡಿಕೋಳ್ಳುವುದು ಮನುಷ್ಯನ ಕೈಯಲ್ಲಿಯೇ ಇದೆ. ಮನುಷ್ಯನಲ್ಲಿ ಅಂಥ ಶಕ್ತಿ ವಿಶೇಷತೆಯು ಅಡಗಿದೆ ಎಂಬುವದನ್ನು ಅರಿಯಬಹುದು.

ಇಲ್ಲಿ ವಸ್ತು ಸ್ಥಿತಿಗೆ ತಕ್ಕಹಾಗೆ ದೃಷ್ಟಾಂತಗಳನ್ನು ನೀಡುತ್ತಾ ಹೋಗಿದ್ದಾರೆ. ಅಷ್ಟೇ ಅಲ್ಲ ಅದಕ್ಕನುಗುಣವಾಗಿ ಮಿಂಚಿನಂತೆ ಸೆಳೆಯುವ ವಿಡಂಬನಾತ್ಮಕ ಮಾತುಗಳು ಸಹ ಕೇಳಿಬರುತ್ತವೆ. ಅದರ ಜೋತೆಯಲ್ಲಿಯೇ ಹಾಸ್ಯದ ಮಾತುಗಳು ಒಂದೊಕ್ಕೊಂದು ಕೈ ಹಿಡಿದು ಮುನ್ನಡೆಯುವಂತೆ ಇಲ್ಲಿ ಚಿತ್ರಿಸಲಾಗಿದೆ. ಈ ಎಲ್ಲ ಮಾತುಗಳು ಬರಿ ಮಾತಲ್ಲ ಮಾತಿನಲ್ಲಿ ಮುಳಿಗಿ ಹೋಗದೆ ಹೊಸ ಹೊಸ ಅರ್ಥವನ್ನು ಇಂದಿನ ಸಾಮಾಜಿಕ ರಾಜಕೀಯ ಸಂಕೀರ್ಣತೆಯೊಂದಿಗೆ ಕಾಲಕ್ಕೆ ಧ್ವನಿಯಾಗಿ ರಸವತ್ತಾದ ರಸವನ್ನು ಚಿತ್ರಣವನ್ನು ಕಾಣಬಹುದು.

ನಮ್ಮ ಜೀವನದಲ್ಲಿ ಎಷ್ಟೇ ಕಷ್ಟ ಕಾರ್ಪಣ್ಯಗಳಿರಬಹುದು ಅದರ ನಡುವೆಯು ಪ್ರತಿಯೊಬ್ಬರು ತಮ್ಮ ಜೀವನವನ್ನು ಸರಿಸಮ ಮಾಡಿಕೊಂಡು ಸಹಜವಾಗಿ ಯಾವ ರೀತಿಯಲ್ಲಿ ಬದುಕಬಹುದು ಎಂಬುವದನ್ನು ತಿಳಿಸುವ ಒಳಧ್ವನಿಯಾಗಿದೆ. ಮನುಷ್ಯನಿಗೆ ಮನರಂಜನೆಯೇ ಜೀವನ ಸಂಜೀವಿನಿ ಅದು ನಮ್ಮ ಬದುಕಿನ ಪ್ರತಿನಿತ್ಯ ವ್ಯವಹಾರದಲ್ಲಿ ತುಂಬಿಕೊಂಡಿದೆ. ಇಂತಹ ಸಂಧೇಶವನ್ನು ಇಲ್ಲಿರುವ ಹಾಸ್ಯ ಬರಹಗಳು ಬಿಂಬಿಸುತ್ತವೆ. ಸಾಮಾನ್ಯ ಮನುಷ್ಯನಿಗೆ ಉದರ ಪೋಷಣೆಯೇ ಒಂದು ಉಪನಿಷತ್ ಎಂಬ ಪರಿಕಲ್ಪನೆಯನ್ನು ಮೂಡಿಸುವಲ್ಲಿ ಶ್ರೀಯುತ ಹುಲಿಗಬಾಳಿಯವರು ಹರಟೆಯ ಕೈಯಲ್ಲಿ ವಿವರಿಸಿದ್ದಾರೆ. ತಮ್ಮ ಉದ್ದೇಶದಲ್ಲಿ ಸಾಪಲ್ಯತೆಯನ್ನು ಪಡೆದಿದ್ದಾರೆ. ತಮ್ಮ ಪ್ರತಿನಿತ್ಯ ಜೀವನದಲ್ಲಿ ತಾವು ಅನುಭವಿಸಿದ ಹಾಸ್ಯವನ್ನು, ವಿಡಂಬನೆಯನ್ನು. ಕೊಂಕು ವ್ಯಂಗ ಮಾತುಗಳನ್ನು, ಚೂಟಿತನವನ್ನು ಯಥೋಚಿತವಾಗಿ ವಿನೂತನ ರೀತಿಯ ಸಖ್ಯವಾಗಿ ಸರಸವಾಗಿ ಚಿತ್ರಿಸಿದ್ದಾರೆ.

ಈ ಹಾಸ್ಯ ಬರಹದಲ್ಲಿ ಲೇಖಕರು ತುಂಬಾ ಮೌಲ್ಯಯುತವಾಗಿ ವಿವರಣೆಯನ್ನು ನೀಡಿದ್ದಾರೆ. ತಾವು ಶಾಲೆಯಲ್ಲಿ ಇದ್ದಾಗ ತಮ್ಮ ಗುರುಗಳು ಕೇಳಿದ ಪ್ರಶ್ನೆಗಳಿಗೆ ವಿಡಂಬನಾತ್ಮಕವಾಗಿ ಉತ್ತರ ಕೊಟ್ಟ ರೀತಿಯನ್ನು ಶ್ರೀಯುತರ ಸೊಗಸಾಗಿ ಚಿತ್ರಿಸಿದ್ದಾರೆ. ಇಂತಹ ಹಾಸ್ಯ ಬರಿತವಾದ ಅನೇಕ ಲೇಖನಗಳನ್ನು ಲೇಖಕರು ಈ ಕೃತಿಯಲ್ಲಿ ಮೂಡಿಸಿದ್ದಾರೆ.

ಹಾಸ್ಯ ಕಥನದಲ್ಲಿ ಲೇಖಕರು ತುಂಬಾ ಸರಸ ಸಲ್ಲಾಪದಿಂದ ವಿವರಣೆಯನ್ನು ನೀಡಿದ್ದಾರೆ. ತಾವು ಅಡುಗೆಯ ಮನೆಯಲ್ಲಿ ಯಾವ ರೀತಿಯಲ್ಲಿ ತನ್ನ ಸತಿಯ ಜೊತೆಯಲ್ಲಿ ಸಂಭಾಷನೆಯನ್ನು ನಡೆಸುತ್ತಿದ್ದ ಎಂಬುವದರ ಬಗ್ಗೆ ಹಾಸ್ಯವನ್ನು ಟೀಪನ ಮಾಡಿ ವಿವರಿಸಿದ್ದಾರೆ.

ಇಂತಹ ಹಗುರ ಬರಹಗಳನ್ನು ಲೇಖಕರು ತುಂಬಾ ಸೊಗಸಾಗಿ ಈ ಕಿರು ಹೊತ್ತಿಗೆಯಲ್ಲಿ ಚಿತ್ರಿಸಿದ್ದಾರೆ. ವಿಡಂಬನೆ ಹಾಗೂ ಹಾಸ್ಯ ಎರಡು ದೇಹ ಒಂದು ಜೀವಭಾವದಂತೆ ಒಂದಾಗಿ ಸುಂದರವಾಗಿ ಈ ಕೃತಿಗೆ ಜೀವ ಕಳೆಯನ್ನು ತುಂಬಿಸಿದ್ದಾರೆ.[೧]

### ೬.೧೨) ಪ್ರಾಯೋಜನೆ ಸುಸ್ಥಿರ ಅಭಿವೃದ್ಧಿಯೆಡೆಗೆ :

ವಿಮೋಚನಾ ಪ್ರಕಾಶನವು ಒಂದೊಂದು ದೃಷ್ಟಿಕೋನದಿಂದ ವಿಶಿಷ್ಟವೂ ಅರ್ಥಗರ್ಭಿತವುವಾದ ಹಾಗೂ ಸಾಮಾಜಿಕ ಪರಿವರ್ತನೆಯ ಉದ್ದೇಶವನ್ನು ಇಟ್ಟುಕೊಂಡು ಮಧುರವಾದ ಕನಸುಗಳನ್ನು ಹೊತ್ತುಕೊಂಡು ಶ್ರೀ ಸುಭಾಷ ಚಿಟುಗುಪಕರ ಹಾಗೂ ಶ್ರೀ ವ್ಹಿ. ಎಸ್. ಮನವಾಡೆಯ ಇಬ್ಬರು ಅನುಭವಿಕ ವ್ಯಕ್ತಿಗಳು ಬರೆದಿರುವ ಪ್ರಾಯೋಜನೆ: ಸುಸ್ಥಿರ ಅಭಿವೃದ್ಧಿಯೆಡೆಗೆ.... ಎಂಬ ಸುಂದರವಾದ ಕೃತಿಯನ್ನು ವಿಮೋಚನಾ ಪ್ರಕಾಶನವು ತನ್ನ ೪೯ ನೇ ಪ್ರಕಟಣೆಯಾಗಿ ಈ ವೈಶಿಷ್ಟ ಪೂರ್ಣವಾದ ಹೊತ್ತಿಗೆಯನ್ನು ಈ ನಾಡಿಗೆ ಅರ್ಪಿಸಿದೆ.

ಈ ಹೊತ್ತಿಗೆಯ ಒಂದೊಂದು ಅಧ್ಯಾಯದಲ್ಲಿ ಮಹತ್ವಪೂರ್ಣವಾದ ಹಾಗೂ ಮೌಲ್ಯಯುತವಾದ ಅಂಶಗಳನ್ನು ಬೆಳಕಿಗೆ ತರಲು ಲೇಖಕರು ಪ್ರಯತ್ನಪಟ್ಟಿದ್ದಾರೆ. ಅಧ್ಯಾಯ-೧ ರಲ್ಲಿ ಅಭಿವೃದ್ಧಿಯ ಸ್ಪಷ್ಟವಾದ ಅರ್ಥವನ್ನು ನೀಡಿದ್ದಾರೆ. ಜನರಿಂದ ಜನರಿಗಾಗಿ ಜನರೇ ನಡೆಸುವ ಕಾರ್ಯಕ್ರಮ ಎಂದು ಹೇಳುವಲ್ಲಿ ಸಮಾಜ ಕಾರ್ಯದ ಮೂಲ ತಿರುಳನ್ನೆ ಸ್ಪಷ್ಟಪಡಿಸಿದ್ದಾರೆ. ವಿವಿಧ ಬಗೆಯ ಸ್ವಯಂ ಸೇವಾ ಸಂಸ್ಥೆಗಳು ಜನರೊಂದಿಗೆ ಇದ್ದುಕೊಂಡು ಜನರ ಸೇವೆಯನ್ನೆ ಮಾಡುವ ಸಮಾಜ ಸಂಸ್ಥೆಗಳೆಂದು ಹೇಳುತ್ತಾ ಆ ಕಾರ್ಯದಲ್ಲಿ ಸಮಾಜದಲ್ಲಿನ ಜನರ ಪಾತ್ರವು ಹಾಗೂ ಕರ್ತವ್ಯ ಅತ್ಯಂತ ಮುಖ್ಯವಾದುದು ಎಂಬುದನ್ನು ಒತ್ತಿ ಹೇಳಿದ್ದಾರೆ. ಒಬ್ಬ ಒಳ್ಳೆಯ ಅಭಿವೃದ್ಧಿ ಕಾರ್ಯಕರ್ತನಿಗೆ ಎಂತಹ ಲಕ್ಷಣದಿಂದ ಕೂಡಿರಬೇಕು ಎಂಬುದನ್ನು ಹಾಗೂ ಯೋಜನೆಯ ತತ್ವಗಳು ಮತ್ತು ವಿವಿಧ ಹಂತಗಳ ಚರ್ಚೆಗಳನ್ನು ಸಹ ಲೇಖಕರು ಅಧ್ಯಾಯ -೧ ರಲ್ಲಿ ಸ್ಪಷ್ಟಪಡಿಸಿದ್ದಾರೆ. ಸಹಭಾಗಿತ್ವದ ಕಾರ್ಯ ಯೋಜನೆಯನ್ನು ಯಾವ ರೀತಿಯಲ್ಲಿ ಅಳವಡಿಸಿಕೊಳ್ಳಬೇಕು. ಪ್ರಾಯೋಜನೆಯ ಕಾರ್ಯವೈಕರಿಯನ್ನು ಹೇಗೆ ನಿಗದಿಮಾಡಿಕೊಳ್ಳಬೇಕೆಂಬುದನ್ನು ವಿಶಿಷ್ಟ ರೀತಿಯಲ್ಲಿ ವಿವರಣೆ ನೀಡಿದ್ದಾರೆ.

ಅಧ್ಯಾಯ-೨ ರಲ್ಲಿ ಗುರಿ-ಗಮ್ಯಗಳ ನಿರ್ದೇಶಿತ ಪ್ರಾಯೋಜನೆಯ ಯೋಜನಾ ಪದ್ಧತಿ ಪ್ರಾತ್ಯಕ್ಷತೆಯ ವಿಶ್ಲೇಷಣೆ ಆಗಿದೆ. ತಾರ್ಕಿಕ ಚೌಕಟ್ಟುಗಳನ್ನು ಅನುಸರಿಸಿ ಮುಖ್ಯ ಸೋಪಾನುಗಳಾಗಿ ವಿಶ್ಲೇಷಣೆಯನ್ನು ನೀಡಿದ್ದಾರೆ. ತಂತ್ರಗಳು ಮತ್ತು ಮೆಟ್ಟಿಲುಗಳ ನಿರೂಪಣೆಯು ಸರಳೀಕೃತವಾಗಿದ್ದು ಅನುಭವದ ವಿಶ್ಲೇಷಣೆಯ ಸಾಕಾರವಾಗಿದೆ.

---

೧. ಉದರೋಪನಿಷತ್ ಲೇಖಕರು ಮಲ್ಲಿಕಾರ್ಜುನ ಹುಲಿಗಬಾಳಿ. ೧೯೯೬ ರಲ್ಲಿ ವಿಮೋಚನಾ ಸಂಘ ಅಥಣಿ.

ಅಧ್ಯಾಯ –೩ ರಲ್ಲಿ ಜನರ ಸಹಭಾಗಿತ್ವದಲ್ಲಿ ಗ್ರಾಮೀಣ ಸಮೀಕ್ಷೆ ಇಲ್ಲಿ ವಿವಿಧ ವಿಧಾನಗಳು ತಂತ್ರಗಳನ್ನು ಯಾವ ರೀತಿಯಲ್ಲಿ ಅಳವಡಿಸಿಕೊಳ್ಳಬೇಕು ಎಂಬುದನ್ನು ಸಾದರಪಡಿಸಿದ್ದಾರೆ. ಸಮೀಕ್ಷೆಯಲ್ಲಿ ಬಳಸುವ ಪ್ರಮುಖ ಸಾಧನಗಳ ಹಾಗೂ ಸೋಪಾನಗಳನ್ನು ವಿವಿಧ ಮಗ್ಗಲುಗಳನ್ನು ಲೇಖಕರು ತಮ್ಮ ಅನುಭವಕ್ಕೆ ಸುಂದರವಾದ ಲೇಪನವನ್ನು ಹಚ್ಚಿ ಜನರಿಗೆ ತಿಳಿಯಪಡಿಸಿದ್ದಾರೆ.

ಅಧ್ಯಾಯ–೪ ರಲ್ಲಿ ನಿಧಿ ಸಂಗ್ರಹದ ಹಲವಾರು ವಿಧಾನಗಳ ಜೊತೆಗೆ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ನಿಧಿ ಸಂಗ್ರಹಗಳು ಯಾವ ರೀತಿಯಲ್ಲಿ ಕಾರ್ಯ ಪ್ರವರ್ತಿಯಾಗಿವೆ ಎಂಬುದಲ್ಲನ್ನು ಅರಿಯಬಹುದಾಗಿದೆ. ಹಾಗೆ ನಿಧಿ ಪಡೆಯಲು ಸ್ವಯಂ ಸೇವಾ ಸಂಸ್ಥೆಗಳಿಗೆ ಈ ಅಧ್ಯಾಯದಲ್ಲಿ ಚಿತ್ರಿಸಲಾಗಿದೆ.

ಅನುಭವದ ಮಹಾ ಸಾಗರದಂತಿರುವ ಇಬ್ಬರು ಲೇಖಕರು ವಿಚಾರಧಾರೆಗಳು ಶ್ರೀಗಂಧದ ಪರಿಮಳದಂತೆ ಈ ಕೃತಿಯಲ್ಲಿ ಮೂಡಿಬಂದಿದೆ ಎಂದು ಹೇಳಬಹುದು.[೧]

---

೧. ಪ್ರಾಯೋಜನೆ: ಸುಸ್ಥಿರ ಅಭಿವೃದ್ಧಿಯೊಡೆಗೆ....
ಲೇಖಕರು : ೧) ಸುಭಾಷ ಚಿಟಗುಪಕರ ೨) ವ್ಹಿ. ಎಸ್. ಮನವಾಡೆ ೨೦೦೪ ರಲ್ಲಿ ವಿಮೋಚನಾ ಸಂಘ ಅಥಣಿ.

## ಅಧ್ಯಾಯ – ೭ :
# ಸಮಾರೋಪ

ಇದುವರೆಗೂ ಒಟ್ಟು ಆರು ಅಧ್ಯಾಯಗಳ ಮೌಲಿಕ ಅಂಶಗಳನ್ನು ಒಳಗೊಂಡಿವೆ. "ವಿಮೋಚನಾ ದೇವದಾಸಿ ಪುನರ್ವಸತಿ ಸಂಘ"ವು ಯಾವ ಪ್ರೇರಣೆಯಿಂದ ಅಸ್ತಿತ್ವಕ್ಕೆ ಬಂದಿತು. ಅದರ ಧ್ಯೇಯ ಧೋರಣೆಗಳು ಎಂತಹವು ಎಂಬುದನ್ನು ಕುರಿತು ಅವಲೋಕಿಸಲಾಯಿತು.

ಅಧ್ಯಾಯ ಒಂದರಲ್ಲಿ ಅಧ್ಯಯನದ, ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ಕುರಿತು ವಿವರಣೆಯನ್ನು ನೀಡಲಾಗಿದೆ ಎರಡರಲ್ಲಿ ಸಂಘದ ಸಂಪೂರ್ಣವಾದ ಮಾಹಿತಿಯನ್ನು ಕೊಡಲಾಗಿದೆ. ಅದರ ಹುಟ್ಟು ಬೆಳವಣಿಗೆಯು ಯಾವ ರೀತಿಯಿಂದಾಯಿತು ಹಾಗೂ ಅದರ ರೂವಾರಿಗಳ ಬಗ್ಗೆ ವಿಶ್ಲೇಷಿಸಲಾಯಿತು. ಸಂಘವು ಇಟ್ಟ ಮಹತ್ವದ ಹೆಜ್ಜೆಯಾದ ವಿಮೋಚನಾ ಸಂಘದ ಪ್ರಸಾರಂಗವು ಸ್ಥಾಪನೆಯಾದರ ಬಗ್ಗೆ ತಿಳಿಸಲಾಗಿದೆ. ಈ ಪ್ರಕಾಶನವು ಇಲ್ಲಿಯ ವರೆಗೆ ಎಷ್ಟು ಕೃತಿಗಳನ್ನು ಲೋಕಾರ್ಪಣೆ ಮಾಡಲಾಗಿದೆ ಎಂಬುದನ್ನು ಇಲ್ಲಿ ತಿರುಚಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ವಿಮೋಚನಾ ಪ್ರಕಾಶನದ ಪದ್ಯ ಸಾಹಿತ್ಯವನ್ನು ಕುರಿತು ನೋಡಲಾಗಿದೆ. ಇಲ್ಲಿ ಅವಲೋಕಿಸಲಾದ ಪ್ರಮುಖವಾದ ಕವನ ಸಂಕಲನಗಳೆಂದರೆ 'ನಗಂದ್ರ ನಾ ಹ್ಯಾಂಗ ನಗಲಿ', 'ದೇಹಕ್ಕೊಂದು ಪ್ರದಕ್ಷಿಣೆ', 'ಬಾನಂಗಳ' ಕುರಿತು ಸಂಕ್ಷಿಪ್ತವಾಗಿ ಮಾಹಿತಿಯನ್ನು ತಿಳಿಯಬಹುದು. ಪ್ರಕಾಶನವು ಪ್ರಕಟಿಸುವ ಪದ್ಯಸಾಹಿತ್ಯವು ಎಂತಹ ಮೌಲ್ಯಗಳನ್ನು ಸಮಾಜಕ್ಕೆ ನೀಡಿದ್ದವು ಎಂಬುದನ್ನು ಕಾಣಬಹುದು. ಅದೇ ರೀತಿಯಲ್ಲಿ ವಿಮೋಚನಾ ಪ್ರಕಾಶನದ ಗದ್ಯ ಸಾಹಿತ್ಯದಲ್ಲಿ ಸೃಜನಶೀಲ ಸಾಹಿತ್ಯ ಮತ್ತು ಸೃಜನೇತರ ಸಾಹಿತ್ಯವಾಗಿ ಎರಡು ಭಾಗಗಳನ್ನಾಗಿ ಮಾಡಿಕೊಂಡು ಅವಲೋಕಿಸಲಾಗಿದೆ. ಹಾಗೆಯೇ ಅಧ್ಯಾಯ ಆರರಲ್ಲಿ ಇತರ ಗ್ರಂಥಗಳನ್ನು ವಿಶ್ಲೇಷಣೆಗೆ ತೆಗೆದುಕೊಂಡು ಅಲ್ಲಿರುವ ಪ್ರಮುಖ ಮೌಲ್ಯಗಳನ್ನು ಕುರಿತು ತಿಳಿಸಲಾಗಿದೆ.

ಇದುವರೆಗೆ ಲಭ್ಯವಾದ ಪುಸ್ತಕಗಳ ಬಗ್ಗೆ ಮಾಹಿತಿಯನ್ನು ನೀಡಲು ಪ್ರಾಮಾಣಿಕವಾಗಿ ಪ್ರಯತ್ನಪಟ್ಟಿದ್ದೇನೆ. ಇಲ್ಲಿ ಪ್ರಕಟಿಸಿರುವ ಬಹುಪಾಲು ಕೃತಿಯೂ ಸಮಾಜದಲ್ಲಿನ ಜನರ ಮನಸ್ಸನ್ನು ಬದಲಾವಣೆ ಮಾಡುವಲ್ಲಿ ಭಾಗಶಃ ಸಹಾಯಕವಾಗಿವೆ. ಸಮಾಜದಲ್ಲಿನ ಮೌಢ್ಯತೆಯನ್ನು ಹೊಗಲಾಡಿಸಲು ಶ್ರೀ ಬಿ. ಎಲ್. ಪಾಟೀಲರವರು ಎಷ್ಟು ಪರಿಶ್ರಮ ಹಿರಿದಾಗಿದೆ ಎಂಬುದನ್ನು ತಿಳಿಯಬಹುದು. ಈ ಅಧ್ಯಯನಕ್ಕೆ ಪೂರಕವಾಗಿ ಅನೇಕ ಕೃತಿಗಳನ್ನು ಬಳಸಿಕೊಂಡಿರುವೆ.

ಅವುಗಳನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ನಿಂಬಂಧವನ್ನು ಸಿದ್ಧಪಡಿಸಿದ್ದೇನೆ. ಆದ್ದರಿಂದ ಈ ನಿಂಬಂಧವು ವಿಮೋಚನಾ ದೇವದಾಸಿ ಪುನರ್ವಸತಿ ಸಂಘದ ಸಂಪೂರ್ಣವಾದ ಮಾಹಿತಿಯನ್ನು ನೀಡದಿದ್ದರೂ ಸಹ ಸಂಕ್ಷಿಪ್ತವಾದ ಮಾಹಿತಿಯನ್ನು ನೀಡಬಹುದೆಂದು ನಂಬಿಕೆ ಇದೆ. ವಿಮೋಚನಾ ಪ್ರಕಾಶನವು ಅನೇಕ ತೌಲನಿಕ ಗ್ರಂಥಗಳನ್ನು ಸಮಾಜದ ಜನರ ಮನಸ್ಸು ಪರಿವರ್ತನೆ ಮಾಡುವ ಸಲುವಾಗಿ ಲೋಕಾರ್ಪಣೆ ಮಾಡಿದೆ ಹಾಗೂ ಇದೊಂದು ಸಾರ್ಥಕವಾಗಿದೆ.

# ಅನುಬಂಧಗಳು

೧) ವಿಮೋಚನಾ ಪ್ರಸಾರಂಗದ ಪ್ರಕಟಣೆಗಳು

೨) ಪರಾಮರ್ಶನ ಗ್ರಂಥಗಳು

**ವಿಮೋಚನಾ ಪ್ರಸಾರಂಗದ ಪ್ರಕಟಣೆಗಳು :**

| | | | |
|---|---|---|---|
| ೧) | ವಿಮೋಚನೆ ವಿವೇಚನೆ | ಶ್ರೀ ವ್ಹಿ. ಎಸ್. ಮನವಾಡೆ | ೧೯೮೫ |
| ೨) | ವಿಮೋಚನಾ ಜ್ಯೋತಿ | ಶ್ರೀ ವ್ಹಿ. ಎಸ್. ಮನವಾಡೆ | ೧೯೮೭ |
| ೩) | ಮುಳ್ಳುದಾರಿಯಲ್ಲಿ ಬಿರಿದ ಹೂಗಳು | ಶ್ರೀ ದು. ನಿಂ. ಬೆಳಗಲಿ | ೧೯೮೯ |
| ೪) | ದೇವದಾಸಿ ಪದ್ಧತಿ ವಿಮೋಚನೆ ಹಾಗೂ ಬಸವಣ್ಣನವರು | ಶ್ರೀಮತಿ ಕಲ್ಯಾಣಮ್ಮ ಲಂಗೋಟಿ | ೧೯೮೯ |
| ೫) | ಬಿನ್ನವತ್ತಳೆ | ಶ್ರೀ ವ್ಹಿ. ಎಸ್. ಮನವಾಡೆ ಮತ್ತು ಶ್ರೀ ಲಕ್ಷ್ಮಣ ಬಳ್ಳೊಳ್ಳಿ | ೧೯೮೯ |
| ೬) | ಯುಗಪ್ರವರ್ತಕ | ಶ್ರೀ ಹಳೇಪೇಟೆ ಚಿಂತಾಮಣಿ | ೧೯೮೯ |
| ೭) | ಸಾರ್ಥಕ ಸೇವೆಯ ೫ ವರುಷಗಳು | ಶ್ರೀ ವ್ಹಿ. ಎಸ್. ಮನವಾಡೆ | ೧೯೯೦ |
| ೮) | ಶರಣ ಪ್ರಕಾಶ | ಶ್ರೀ ವ್ಹಿ. ಎಸ್. ಮನವಾಡೆ | ೧೯೯೦ |
| ೯) | ಕತ್ತಲೆ ಕಳೆದ ಬೆಳಕು | ಶ್ರೀ ಕೆ. ಎಲ್. ಕುಂದರಗಿ ಮತ್ತು ಶ್ರೀ ಜಿ. ಎಚ್. ಹನ್ನೆರಡುಮಠ | ೧೯೯೧ |
| ೧೦) | ದೇವದಾಸಿ | ಶ್ರೀ ದು. ನಿಂ. ಬೆಳಗಲಿ | ೧೯೯೧ |
| ೧೧) | ಸುಯೋಗ | ಶ್ರೀ ಈಶ್ವರ ಕಾಪಸೆ | ೧೯೯೨ |
| ೧೨) | ಹರಕೆಯ ಹೆಣ್ಣು | ಡಾ. ಕೆ. ಜಿ. ಗುರುಮೂರ್ತಿ | ೧೯೯೨ |
| ೧೩) | ಸೂರ್ಯ ನಮಸ್ಕಾರ | ಶ್ರೀ ಈಶ್ವರ ಕಾಪಸೆ | ೧೯೯೩ |
| ೧೪) | ದೇವದಾಸಿ ಸಂಪ್ರದಾಯ | ಡಾ. ಜೋಗನ್ ಶಂಕರ | ೧೯೯೩ |
| ೧೫) | ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ | ಶ್ರೀ ಎಸ್. ವಾಯ್. ಹಂಜಿ | ೧೯೯೩ |
| ೧೬) | ಸಲೀಂ ಚಾಚಾ | ಶ್ರೀ ಜಯವಂತ ಕಾಡದೇವರ | ೧೯೯೪ |
| ೧೭) | ಪದ್ಮಶ್ರೀ ರತ್ನಪ್ಪ ಕಂಬಾರ | ಶ್ರೀ ಲಕ್ಷ್ಮಣ ಬಳ್ಳೊಳ್ಳಿ | ೧೯೯೫ |

| | | | |
|---|---|---|---|
| ೧೮) | ಮಕ್ಕಳಿಗಾಗಿ ಡಾ. ಬಿ. ಆರ್. ಅಂಬೇಡ್ಕರ | ಶ್ರೀ ಜಯವಂತ ಕಾಡದೇವರ | ೧೯೯೫ |
| ೧೯) | ಶರಣರ ಆಂದೋಲನ ಹಾಗೂ ಹೊಸ ಸಮಾಜದ ಪರಿಕಲ್ಪನೆ | ಡಾ. ಎಂ. ಬಿ. ಹೂಗಾರ | ೧೯೯೫ |
| ೨೦) | ದೇವದಾಸಿ: ಒಂದು ಅವಲೋಕನ | ಶ್ರೀ ವ್ಹಿ. ಎಸ್. ಮನವಾಡೆ | ೧೯೯೬ |
| ೨೧) | ಕನ್ನಡ–ಮರಾಠಿ ದಲಿತ ಸಾಹಿತ್ಯ | ಡಾ. ಸರಜೂ ಕಾಟ್ಕರ | ೧೯೯೬ |
| ೨೨) | ಉದರೋಪನಿಷತ್ | ಶ್ರೀ ಮಲ್ಲಿಕಾರ್ಜುನ ಹಲಗಬಾಳಿ | ೧೯೯೬ |
| ೨೩) | ಧರ್ಮ ಮತ್ತು ರಾಜಕೀಯ | ಡಾ. ಕೆ. ಜಿ. ಗುರುಮೂರ್ತಿ | ೧೯೯೬ |
| ೨೪) | ಮತ್ತೊಂದು ಮುಖ | ಶ್ರೀ ಜಿ. ಎಸ್. ವಡಗಾಂವಿ | ೧೯೯೬ |
| ೨೫) | ಬುದ್ಧ ಮತ್ತು ಅವನ ಧರ್ಮ | ಶ್ರೀ ಎನ್. ಕೆ. ನಾಗರಾಜು | ೧೯೯೭ |
| ೨೬) | ಸಿ. ಎಸ್. ಗೋಜೇರ ಅಪೂರ್ವ ೬೦ | ಡಾ. ಪಿ. ಎನ್. ಮಯ್ಯ | ೧೯೯೭ |
| ೨೭) | ಎದೆಹಾಲು | ಶ್ರೀ ಈಶ್ವರ ಕಾಪಸೆ | ೧೯೯೭ |
| ೨೮) | ಶಿವಶರಣೆ ಸೂಳೆ ಸಂಕವ್ವೆ | ಶ್ರೀ ಲಿಂಗಣ್ಣ ಸತ್ಯಂಪೇಟ | ೧೯೯೮ |
| ೨೯) | ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ | ಡಾ. ಕಮಲಾ ಹಮ್ಮಿಗೆ | ೧೯೯೮ |
| ೩೦) | ಹೂಬುಟ್ಟಿ | ಕುಮಾರಿ ವರ್ಷಾ ಹೂಗಾರ | ೧೯೯೮ |
| ೩೧) | ಬದುಕಲು ಇದೊಂದೇ ದಾರಿ | ಶ್ರೀ ಕೆ. ಬಿ. ಪಡಕೆ | ೧೯೯೮ |
| ೩೨) | ಬೆಳಗಲಿ ಮತ್ತು ಇತರರು | ಡಾ. ಈ. ಎಸ್. ಕಾಪಸೆ | ೧೯೯೮ |
| ೩೩) | ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು | ಡಾ. ವೀರೇಶ ಬಡಿಗೇರ | ೧೯೯೯ |
| ೩೪) | ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು | ಶ್ರೀ ಲಕ್ಷ್ಮಣ ನಾಗನೂರ | ೧೯೯೯ |
| ೩೫) | ನಾ ನಗಂದ್ರ ಹ್ಯಾಂಗ ನಗಲಿ | ಶ್ರೀ ಬಿ. ಆರ್. ಕಾಮಗೋಳ | ೧೯೯೯ |
| ೩೬) | ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು | ಡಾ. ಸರಜೂ ಕಾಟ್ಕರ | ೧೯೯೯ |
| ೩೭) | ಆಯುರ್ವೇದ ಕೈಪಿಡಿ | ಶ್ರೀ ಡಿ. ಬಿ. ಕೊಟಬಾಗಿ | ೧೯೯೯ |
| ೩೮) | ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದಿಯ ಅಧ್ಯಯನ | ಡಾ. ಅರ್ಜುನ ಗೋಳಸಂಗಿ | ೨೦೦೦ |
| ೩೯) | ವ್ಹೇನ್ ಥೋರ್ನ್ಸ್ ಬ್ಲಾಸಮ್ಡ್ | ಡಾ. ವ್ಹಿ. ಟಿ. ನಾಯಿಕ | ೨೦೦೦ |
| ೪೦) | ಸಂಪ್ರದಾಯದ ಸುಳಿಯಲ್ಲಿ | ಪೂಜ್ಯಶ್ರೀ ಚೆನ್ನಬಸವದೇವರು | ೨೦೦೦ |
| ೪೧) | ಅಂತರಾಳ | ಶ್ರೀ ಸಿ. ಎ. ಇಟ್ನಾಳಮಠ | ೨೦೦೧ |
| ೪೨) | ಹೆಜ್ಜೆಗಳು | ಶ್ರೀ ಸಿ. ಎ. ಇಟ್ನಾಳಮಠ | ೨೦೦೧ |
| ೪೩) | ದೇಹಕ್ಕೊಂದು ಪ್ರದಕ್ಷಿಣೆ | ಡಾ. ವಸಂತ ಕುಲಕರ್ಣಿ | ೨೦೦೧ |
| ೪೪) | ಬಾನಂಗಳ | ಕುಮಾರಿ ವರ್ಷಾ ಪೂಜಾರ | ೨೦೦೨ |
| ೪೫) | ಸಂಚಾರಿ | ಶ್ರೀ ಬಿ. ಎ. ಸನದಿ | ೨೦೦೨ |

| | | | |
|---|---|---|---|
| ೪೬) | ಆಹ್ವಾನ | ಶ್ರೀ ಶ್ರೀನಿವಾಸ ಕುಲಕರ್ಣಿ | ೨೦೦೨ |
| ೪೭) | ದೇವರಾಯ | ಡಾ. ಸರಜೂ ಕಾಟ್ಕರ | ೨೦೦೨ |
| ೪೮) | ಹೆಜ್ಜೆ | ಶ್ರೀಮತಿ ಲತಾ ಗುತ್ತಿ | ೨೦೦೪ |
| ೪೯) | ಪ್ರಯೋಜನೆ: ಸುಸ್ಥಿರ ಅಭಿವೃದ್ಧಿಯೆಡೆಗೆ | ಶ್ರೀ ಸುಭಾಷ ಚಿಟಗುಪಕರ | ೨೦೦೪ |
| ೫೦) | ರಿಲಿಜನ್ ಆ್ಯಂಡ್ ಪಾಲಿಟಿಕ್ಸ್ | ಡಾ. ಎ. ಎ. ಮುತಾಲಿಕ ದೇಸಾಯಿ | ೨೦೦೫ |
| ೫೧) | ಶ್ರೀ ಸಂತರಾಮ ವಿಜಯ | ಶ್ರೀ ವ್ಹಿ. ಎಸ್. ಮನವಾಡೆ | ೨೦೦೫ |
| ೫೨) | ಕಾಪಾಡು ಕೂಡಲಸಂಗಮದೇವಾ | ಶ್ರೀ ದು. ನಿಂ. ಬೆಳಗಲಿ | ೨೦೦೬ |
| ೫೩) | ದು. ನಿಂ. ಬೆಳಗಲಿಯವರ ಬದುಕು ಬರಹ: ಒಂದು ಅಧ್ಯಯನ | ಡಾ. ಎಸ್. ಬಿ. ಮಲ್ಲೋಳಿ | ೨೦೦೭ |
| ೫೪) | ವಿಮೋಚನಾ ಸಂಘ ಎರಡು ದಶಕಗಳ ಅವಲೋಕನ | ಶ್ರೀ ವ್ಹಿ. ಎಸ್. ಮನವಾಡೆ | ೨೦೦೭ |
| ೫೫) | ಇದು ಭಾರತ | ಶ್ರೀ ಸುರೇಶ ವೆಂ. ಕುಲಕರ್ಣಿ | ೨೦೦೭ |
| ೫೬) | ಬಸವಪ್ರಭು: ಬಿ. ಎಲ್. ಪಾಟೀಲ ಅಭಿನಂದನ ಗ್ರಂಥ | ಡಾ. ಎಂ. ಎಂ. ಕಲಬುರ್ಗಿ | ೨೦೦೭ |
| ೫೭) | ಅಥಣಿ ತಾಲೂಕು: ಸಾಹಿತ್ಯ ದರ್ಶನ | ಡಾ. ವ್ಹಿ. ಎಸ್. ಮಾಳಿ | ೨೦೦೮ |
| ೫೮) | ಹಿಂದೂ ಧರ್ಮ (ಯಶಸ್ಸು & ಯಾತನೆ) | ಶ್ರೀ ಎಸ್. ಕೆ. ಕುಲಕರ್ಣಿ ಅನು: ಶೇಷಗಿರಿ ಹಾರನಹಳ್ಳಿ | ೨೦೦೯ |
| ೫೯) | ಕೈಲಾಸ-ಮಾನಸ | ಶ್ರೀ ವೆಂಕಟೇಶ ಮಾಚಕನೂರ | ೨೦೧೦ |

# ಪರಾಮರ್ಶನ ಗ್ರಂಥಗಳು


| | | |
|---|---|---|
| ೧) ಯುಗಪ್ರವರ್ತಕ | ಶ್ರೀ ಹಳೇಪೇಟೆ ಚಿಂತಾಮಣಿ | ೧೯೮೯ |
| ೨) ಶರಣ ಪ್ರಕಾಶ | ಶ್ರೀ ವ್ಹಿ. ಎಸ್. ಮನವಾಡೆ | ೧೯೯೦ |
| ೩) ಹರಕೆಯ ಹೆಣ್ಣು | ಡಾ. ಕೆ. ಜಿ. ಗುರುಮೂರ್ತಿ | ೧೯೯೨ |
| ೪) ಸೂರ್ಯ ನಮಸ್ಕಾರ | ಶ್ರೀ ಈಶ್ವರ ಕಾಪಸೆ | ೧೯೯೩ |
| ೫) ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ | ಶ್ರೀ ಎಸ್. ವಾಯ್. ಹಂಜಿ | ೧೯೯೩ |
| ೬) ಸಲೀಂ ಚಾಚಾ | ಶ್ರೀ ಜಯವಂತ ಕಾಡದೇವರ | ೧೯೯೪ |
| ೭) ಪದ್ಮಶ್ರೀ ರತ್ನಪ್ಪ ಕಂಬಾರ | ಶ್ರೀ ಲಕ್ಷ್ಮಣ ಬಳ್ಳೊಳ್ಳಿ | ೧೯೯೫ |
| ೮) ಉದರೋಪನಿಷತ್ | ಶ್ರೀ ಮಲ್ಲಿಕಾರ್ಜುನ ಹಲಗಬಾಳಿ | ೧೯೯೬ |
| ೯) ಧರ್ಮ ಮತ್ತು ರಾಜಕೀಯ | ಡಾ. ಕೆ. ಜಿ. ಗುರುಮೂರ್ತಿ | ೧೯೯೬ |
| ೧೦) ಎದೆಹಾಲು | ಶ್ರೀ ಈಶ್ವರ ಕಾಪಸೆ | ೧೯೯೭ |
| ೧೧) ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ | ಡಾ. ಕಮಲಾ ಹಮ್ಮಿಗೆ | ೧೯೯೮ |
| ೧೨) ಬದುಕಲು ಇದೊಂದೇ ದಾರಿ | ಶ್ರೀ ಕೆ. ಬಿ. ಪಡಕೆ | ೧೯೯೮ |
| ೧೩) ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು | ಡಾ. ವೀರೇಶ ಬಡಿಗೇರ | ೧೯೯೯ |
| ೧೪) ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು | ಶ್ರೀ ಲಕ್ಷ್ಮಣ ನಾಗನೂರ | ೧೯೯೯ |
| ೧೫) ನಾ ನಗಂದ್ರ ಹ್ಯಾಂಗ ನಗಲಿ | ಶ್ರೀ ಬಿ. ಆರ್. ಕಾಮಗೋಳ | ೧೯೯೯ |
| ೧೬) ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು | ಡಾ. ಸರಜೂ ಕಾಟ್ಕರ | ೧೯೯೯ |
| ೧೭) ದೇಹಕ್ಕೊಂದು ಪ್ರದಕ್ಷಿಣೆ | ಡಾ. ವಸಂತ ಕುಲಕರ್ಣಿ | ೨೦೦೧ |
| ೧೮) ಬಾನಂಗಳ | ಕುಮಾರಿ ವರ್ಷಾ ಮೂಜಾರ | ೨೦೦೨ |
| ೧೯) ಸಂಚಾರಿ | ಶ್ರೀ ಬಿ. ಎ. ಸನದಿ | ೨೦೦೨ |
| ೨೦) ಹೆಜ್ಜೆ | ಶ್ರೀಮತಿ ಲತಾ ಗುತ್ತಿ | ೨೦೦೪ |
| ೨೧) ಪ್ರಯೋಜನೆ: ಸುಸ್ಥಿರ ಅಭಿವೃದ್ಧಿಯೆಡೆಗೆ | ಶ್ರೀ ಸುಭಾಷ ಚಿಟಗುಪಕರ | ೨೦೦೪ |

| | | | |
|---|---|---|---|
| ೨೨) | ಕಾಪಾಡು ಕೂಡಲಸಂಗಮದೇವಾ | ಶ್ರೀ ದು. ನಿಂ. ಬೆಳಗಲಿ | ೨೦೦೬ |
| ೨೩) | ದು. ನಿಂ. ಬೆಳಗಲಿಯವರ ಬದುಕು ಬರಹ: ಒಂದು ಅಧ್ಯಯನ | ಡಾ. ಎಸ್. ಬಿ. ಮಲ್ಲೋಳಿ | ೨೦೦೭ |
| ೨೪) | ವಿಮೋಚನಾ ಸಂಘ ಎರಡು ದಶಕಗಳ ಅವಲೋಕನ | ಶ್ರೀ ವ್ಹಿ. ಎಸ್. ಮನವಾಡೆ | ೨೦೦೭ |
| ೨೫) | ಇದು ಭಾರತ | ಶ್ರೀ ಸುರೇಶ ವೆಂ. ಕುಲಕರ್ಣಿ | ೨೦೦೭ |
| ೨೬) | ಬಸವಪ್ರಭು: ಬಿ. ಎಲ್. ಪಾಟೀಲ ಅಭಿನಂದನ ಗ್ರಂಥ | ಡಾ. ಎಂ. ಎಂ. ಕಲಬುರ್ಗಿ | ೨೦೦೭ |
| ೨೭) | ಅಥಣಿ ತಾಲೂಕು: ಸಾಹಿತ್ಯ ದರ್ಶನ | ಡಾ. ವ್ಹಿ. ಎಸ್. ಮಾಳಿ | ೨೦೦೮ |
| ೨೮) | ಹಿಂದೂ ಧರ್ಮ (ಯಶಸ್ಸು & ಯಾತನೆ) | ಶ್ರೀ ಎಸ್. ಕೆ. ಕುಲಕರ್ಣಿ ಅನು: ಶೇಷಗಿರಿ ಹಾರನಹಳ್ಳಿ | ೨೦೦೯ |
| ೨೯) | ಕೈಲಾಸ-ಮಾನಸ | ಶ್ರೀ ವೆಂಕಟೇಶ ಮಾಚಕನೂರ | ೨೦೧೦ |

# ಜಿ. ಎಲ್. ಪಾಟೀಲ



"ವಿಮೋಚನಾ ದೇವದಾಸಿ ಪುನರ್ವಸತಿ ಸಂಘ" ದ
ರುವಾರಿಗಳು



ಮಾನ್ಯ ರಾಷ್ಟ್ರಪತಿಗಳಾದ ಶ್ರೀ ಕೆ.ಆರ್.ನಾರಾಯಣ
ಅವರಿಂದ ಶ್ರೀ ಬಿ.ಎಲ್. ಪಾಟೀಲವರು ಸಂಸ್ಥೆಯ
ಪರವಾಗಿ ರಾಷ್ಟ್ರಪ್ರಶಸ್ತಿ ಸ್ವೀಕರಿಸುತ್ತಿರುವುದು ೧೯೯೭



ಶ್ರೀ ಕೆ.ಆರ್. ನಾರಾಯಣ ಅವರಿಂದ
ಬಿ. ಎಲ್. ಪಾಟೀಲ ಅವರಿಗೆ ಅಭಿನಂದನೆ







ಶ್ರೀ ಬಿ.ಎಲ್. ಪಾಟೀಲರವರು
ಮಾನ್ಯ ಶ್ರೀ ಎಸ್.ಎಮ್ ಕೃಷ್ಣಾ ಅವರಿಂದ
ಪ್ರಶಸ್ತಿ ಸ್ವೀಕರಿಸುತ್ತಿರುವದು



